# "ಗೋವಿಂದ ಪೈಯವರ ಗೊಲ್ಗೊಥಾ ಮತ್ತು ಬೈಬಲ್ ಒಂದು ತೌಲನಿಕ ಅಧ್ಯಯನ"

KTSMKS - 00441

ಕನ್ನಡ ವಿಶ್ವವಿದ್ಯಾಲಯ, ಹಂಪಿಗೆ

ಎಂ.ಫಿಲ್. ಪದವಿಗಾಗಿ ಸಾದರಪಡಿಸಿದ ಸಂಪ್ರಬಂಧ

ಸಂಶೋಧಕಿ

ಬ್ಲಯಾನಿ ಪ್ರಮಿಳಾ ಡಿ'ಸೋಜ

ಮಾರ್ಗದರ್ಶಕರು

ಪ್ರೊ.ಎ.ವಿ. ನಾವಡ

೨೦೧೦

ರ್ನಾಟಕ ಥಿಯೋಲಾಜಿಕಲ್ ಸಂಶೋಧನಾ ಕೇಂದ್ರ

ಬಲ್ಮಠ, ಮಂಗಳೂರು

846

846

# "ಗೋವಿಂದ ಪೈಯವರ ಗೊಲ್ಗೊಥಾ ಮತ್ತು ಬೈಬಲ್ ಒಂದು ತೌಲನಿಕ ಅಧ್ಯಯನ"

## KTSMKS- 00441

ಕನ್ನಡ ವಿಶ್ವವಿದ್ಯಾಲಯ, ಹಂಪಿಗೆ

ಎಂ.ಫಿಲ್ ಪದವಿಗಾಗಿ ಸಾದರಪಡಿಸಿದ ಸಂಪ್ರಬಂಧ

ಸಂಶೋಧಕಿ

ಬ್ಲಯಾನಿ ಪ್ರಮಿಳಾ ಡಿ'ಸೋಜ

ಮಾರ್ಗದರ್ಶಕರು

ಪ್ರೊ.ಎ.ವಿ.ನಾವಡ

೨೦೧೦

ಕರ್ನಾಟಕ ಥಿಯೋಲಾಜಿಕಲ್ ಸಂಶೋಧನಾ ಕೇಂದ್ರ

ಬಲ್ಮಠ, ಮಂಗಳೂರು

# ಯೋಗ್ಯತಾ ಪತ್ರ

ಬ್ಲಯಾನಿ ಪ್ರಮಿಳಾ ಡಿ'ಸೋಜ ಅವರು ನನ್ನ ಸಲಹೆ ಮತ್ತು ಮಾರ್ಗದರ್ಶನದಲ್ಲಿ **"ಗೋವಿಂದ ಪೈಯವರ ಗೊಲ್ಗೊಥಾ ಮತ್ತು ಬೈಬಲ್-ಒಂದು ತೌಲನಿಕ ಅಧ್ಯಯನ"** ಎಂಬ ಶೀರ್ಷಿಕೆಯ ಈ ಸಂಪ್ರಬಂಧವನ್ನು ಎಂ.ಫಿಲ್ ಪದವಿ ಪ್ರಾಪ್ತಿಗಾಗಿ ಕನ್ನಡ ವಿಶ್ವವಿದ್ಯಾಲಯ, ಹಂಪಿಗೆ ಸಲ್ಲಿಸಬೇಕೆಂದು ಸಿದ್ಧಪಡಿಸಿದ್ದಾರೆ. ಈ ಸಂಪ್ರಬಂಧವು ಸಂಶೋಧಕಿಯ ಸ್ವಂತ ಪರಿಶ್ರಮ, ಅಭಿಪ್ರಾಯ ಸಂಗ್ರಹ, ಬೋಧನೆ ಮತ್ತು ಸಂಶೋಧನೆಯ ಫಲಸ್ವರೂಪವಾಗಿದೆ. ಇವರು ಸಂಪ್ರಬಂಧದ ವಿಷಯವನ್ನು ಅಥವಾ ಇದರ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿಗಾಗಲಿ ಅಥವಾ ಇನ್ನಿತರ ಉದ್ದೇಶಗಳಿಗಾಗಿಯಾಗಲಿ ಬಳಸಿಕೊಂಡಿಲ್ಲ.

ಕರ್ನಾಟಕ ಥಿಯೋಲಾಜಿಕಲ್ ಸಂಶೋಧನಾ ಕೇಂದ್ರ
ಬಲ್ಮಠ, ಮಂಗಳೂರು

**ಪ್ರೊ. ಎ.ವಿ. ನಾವಡ**
**ಸಂಶೋಧನಾ ಮಾರ್ಗದರ್ಶಕರು.**

# ಪ್ರಮಾಣ ಪತ್ರ

ಕನ್ನಡ ವಿಶ್ವವಿದ್ಯಾನಿಲಯ, ಹಂಪಿಗೆ ಎಂ.ಫಿಲ್ ಪದವಿಗಾಗಿ ಸಾದರಪಡಿಸಿದ **'ಗೋವಿಂದ ಪೈಯವರ ಗೊಲ್ಗೊಥಾ ಮತ್ತು ಬೈಬಲ್-ಒಂದು ತೌಲನಿಕ ಅಧ್ಯಯನ'** ಎಂಬ ಶೀರ್ಷಿಕೆಯ ಈ ಸಂಪ್ರಬಂಧವು ಈ ಸಂಶೋಧಕಿಯ ಸ್ವತ್ರಂತ್ರ ಕೃತಿಯಾಗಿದ್ದು ವಿಶ್ಲೇಷಣೆ ಮತ್ತು ಅಧ್ಯಯನದ ಫಲೋದಯವಾಗಿದೆ. ಮಂಗಳೂರಿನ ಕರ್ನಾಟಕ ಥಿಯೋಲಾಜಿಕಲ್ ಸಂಶೋಧನಾ ಕೇಂದ್ರದಲ್ಲಿ ಪ್ರೊ. ಎ.ವಿ.ನಾವಡ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ ಈ ಸಂಪ್ರಬಂಧವನ್ನು ಬೇರಾವುದೇ ಪದವಿ, ಡಿಪ್ಲೋಮ ಅಥವಾ ತತ್ಸಮಾನ ಉಪಾಧಿಗಳ ಪ್ರಾಪ್ತಿಗಾಗಿ ಅಥವಾ ಆರ್ಥಿಕ ಲಾಭಕ್ಕಾಗಿ ಇಡಿಯಾಗಿ ಅಥವಾ ಬಿಡಿಯಾಗಿ ಬಳಸಿಕೊಂಡಿಲ್ಲವೆಂದು ನಾನು ಈ ಮೂಲಕ ದೃಢಪಡಿಸುತ್ತೇನೆ.

**ಕರ್ನಾಟಕ ಥಿಯೋಲಾಜಿಕಲ್ ಸಂಶೋಧನಾ ಕೇಂದ್ರ** **ಬ್ಲಯಾನಿ ಪ್ರಮೀಳಾ ಡಿ'ಸೋಜ**

**ಬಲ್ಮಠ, ಮಂಗಳೂರು**

# "ಗೋವಿಂದ ಪೈಯವರ ಗೊಲ್ಗೊಥಾ ಮತ್ತು ಬೈಬಲ್ ಒಂದು ತೌಲನಿಕ ಅಧ್ಯಯನ"

## ಅಧ್ಯಾಯ ವಿವರಗಳು

# ಅಧ್ಯಾಯ ೧

## ೧. ಅಧ್ಯಯನದ ಉದ್ದೇಶ, ಸ್ವರೂಪ, ವ್ಯಾಪ್ತಿ

೧.೧. ಪ್ರಬಂಧದ ಪ್ರಸ್ತಾವನೆ

೧.೨. ಪ್ರಬಂಧದ ಉದ್ದೇಶ

೧.೩. ಪ್ರಬಂಧದ ವ್ಯಾಪ್ತಿ

೧.೪. ಹಿಂದಣ ಅಧ್ಯಯನದ ಹೆಜ್ಜೆಗಳು

# ೧. ಅಧ್ಯಯನದ ಉದ್ದೇಶ, ಸ್ವರೂಪ, ವ್ಯಾಪ್ತಿ

## ೧.೧. ಪ್ರಸ್ತಾವನೆ

ಗೋವಿಂದ ಪೈಗಳು ಕನ್ನಡ ನವೋದಯದ ಕವಿಗಳಲ್ಲಿ ಒಬ್ಬರು. ಪ್ರಾಸವೇ ಕವಿತೆಯ ಅಸುವೆಂದು ಪ್ರಾಚೀನರು ಬಗೆದಿದ್ದರೆ ಅಂತಹ ಪರಂಪರಾಗತ ಸಂಪ್ರದಾಯವೊಂದನ್ನು ತನ್ನ ತಾರ್ಕಿಕತೆಯಿಂದ ಮುರಿದು ಹಾಕಿ ಮುಂದೆ ಬಂದವರು "ಪ್ರಾಸವ ನೀಗಲೇ ತೊರೆದುಬಿಡುವುದೇ ನಿಶ್ಚಯಂ" ಎಂಬ ನಿರ್ಧಾರದಿಂದ ಮುಂದಡಿಯಿಟ್ಟ ಕೀರ್ತಿ ಪೈಗಳದು. ಅವರ ಪ್ರಾಸರಹಿತ ಕವಿತೆ "ಸ್ವದೇಶಾಭಿಮಾನಿ" ಪತ್ರಿಕೆಯಲ್ಲಿ ಅಚ್ಚಾಯಿತು. ಆಗ ಕನ್ನಡ ಕಾವ್ಯ ಮಾರ್ಗದಲ್ಲಿ ಹುಲಿ! ಹುಲಿ! ಎಂಬಂತಹ ಬೊಬ್ಬೆಯೆದ್ದಿತು. "ಇಂದು ಒಬ್ಬನೇ ನಡೆವ ಮೇಕೆದಾರಿಯೇ ಮುಂದೆ ತೇರು ಎಳೆವ ಹೆದ್ದಾರಿ" ಎಂದು ಅವರು ಅಂದು ಮಾಡಿದ ಧೀರ ನಿರ್ಧಾರದಲ್ಲಿ ಎಂತಹ ಭವ್ಯ ಭವಿಷ್ಯ ಸತ್ಯ ಅಡಕವಾಗಿತ್ತೆಂದು ನಾವಿಂದು ಅರ್ಥಮಾಡಿಕೊಳ್ಳಬಹುದಾಗಿದೆ.

೧೯೦೦ರ ಕಾಲಕ್ಕೆ ಗೋವಿಂದ ಪೈಗಳು ಕವನಿಸಲು ತೊಡಗಿದ್ದರು. ಅವರ ಮೊದಲ ಕವಿತಾ ಸಂಗ್ರಹ "ಗಿಳಿವಿಂಡು" ಕಳೆದ ಅರ್ಧ ಶತಮಾನಕ್ಕೂ ಮೀರಿ ಕವಿಯ ಅಕುಂಠಿತ ಕಾವ್ಯವಾಣಿ ಕನ್ನಡನಾಡಿನಲ್ಲಿ ನಿನದಿಸಿತು.

'ಗೊಲ್ಗೊಥಾ' ಕವಿತೆ ೧೯೩೧ರ ಸಾಲಿಗೆ ರಚಿತವಾಯಿತು. ಕನ್ನಡ ಸಾಹಿತ್ಯ, ಜೈನ ಲಿಂಗಾಯಿತ, ಬ್ರಾಹ್ಮಣ ಇತ್ಯಾದಿ ಭಾರತೀಯ ಧಾರ್ಮಿಕ ಪುರಾಣಕಥೆಗಳಿಂದ, ಪುರಾಣ ತುಂಬಿದ್ದು ನಾವೀನ್ಯತೆಯಿಲ್ಲದೆ ನರಳುತ್ತಿರುವುದನ್ನು ತಾವು ಇಂದಿಗೂ ನೋಡುತ್ತಿದ್ದೇವೆ.

ಪಶ್ಚಿಮದ ಗಾಳಿಗೆ ಮೈಯೊಡ್ಡಿದವರು ಹೊಸಧಾಟಿ ಹಿಡಿದು ಕೆಲವು ಕವನಗಳನ್ನು ಬರೆಯುತ್ತಿದ್ದರು. ಗೋವಿಂದ ಪೈಯವರು ಬೈಬಲ್‌ನ ಆಧಾರದಿಂದ ಕನ್ನಡ ಸಾಹಿತ್ಯ ಸತ್ವವನ್ನು ವೃದ್ಧಿಗೊಳಿಸಲು ಯತ್ನಿಸಿದರು. ಕ್ರಿಸ್ತ ಪುರಾಣವನ್ನೆತ್ತಿಕೊಂಡು ಅಪ್ರತಿಮ ಕಾವ್ಯ ಖಂಡ 'ಗೊಲ್ಗೊಥಾ'ವನ್ನು ರಚಿಸಿದರು.

'ಗೊಲ್ಗೊಥಾ' ಏಸುವಿನ ಕಡೆದಿನದ ದುರಂತ ಚಿತ್ರಣ ಸತ್ಯಕ್ಕಾಗಿ ಪ್ರಾಣತೆತ್ತ ಜಗದ್ವಂದ್ಯನಾದ ಮಹಾ ವಿಭೂತಿ ಪುರುಷನ ಪುಣ್ಯಕಥೆ. ಮಹಾತ್ಮ ಏಸುವಿನ ಉನ್ನತ ವ್ಯಕ್ತಿತ್ವಕ್ಕೆ ಸಲ್ಲಬೇಕಾದ ಗೌರವ ಗಾಂಭೀರ್ಯಗಳು ಈ ಕಾವ್ಯ ಖಂಡದ ಪ್ರತಿಸಂಕ್ತಿಯಲ್ಲಿ, ಪದಪುಂಜಗಳಲ್ಲಿ

ಒಡಮೂಡಿವೆ. ಕಾವ್ಯಮಯವಾಣಿ ಹೊನಲಾಗಿ ಹರಿದಿದೆ. ಇಲ್ಲಿನ ವರ್ಣನೆ, ಚಿತ್ರಣ, ಆಯಾ ವ್ಯಕ್ತಿ ಸನ್ನಿವೇಶಗಳು ನಮ್ಮ ಕಣ್ಣಮುಂದೆ ಕಟ್ಟುವಂತೆ ಇದೆ. "ಗೊಲ್ಗೊಥಾ"ದಲ್ಲಿ ಬರುವ ಉಪಮಾದಿ ಅಲಂಕಾರಗಳು ಅಸದೃಶವಾದವುಗಳು. ಕಥಾವಸ್ತು, ಅಲಂಕಾರ ನಿರೂಪಣೆ, ಶೈಲಿ ಇವುಗಳೆಲ್ಲದರಲ್ಲಿಯೂ ಈ ಖಂಡಕಾವ್ಯವು ಅಪೂರ್ವವಿದ್ದು ಚಿರನೂತನವೂ ಶಾಶ್ವತವೂ ಆಗಿ ನಿಲ್ಲತಕ್ಕ ಕವಿಕೃತಿಯಾಗಿದೆ.

ಪಂಪನಂತೆ ಪೈಯವರು, "ಗೊಲ್ಗೊಥಾದಲ್ಲಿ ಧರ್ಮ (ಕ್ರೈಸ್ತ)ವನ್ನು ಕಾವ್ಯ ಧರ್ಮದೊಂದಿಗೆ ಮೇಳೈಸುವ ಯಶಸ್ವೀ ಪ್ರಯತ್ನ ಮಾಡಿದ್ದಾರೆ.

ಗೋವಿಂದ ಪೈಯವರಿಗೆ ಕವಿಯಾಗಿ ಪ್ರಸಿದ್ಧಿತಂದ ಕೃತಿಗಳು ಅವರ ಖಂಡಕಾವ್ಯಗಳು, 'ಗೊಲ್ಗೊಥಾ' ಮತ್ತು 'ವೈಶಾಖಿ' ಮುಖ್ಯವಾದವುಗಳು. ಈ ಕೃತಿಗಳು ಮಹಾತ್ಮರ ಮರಣವನ್ನು ಅವರ ಕೊನೆಯ ದಿನದ ಕಥೆಯನ್ನು ವಸ್ತುವಾಗಿ ಉಳ್ಳದ್ದು. ಅವರು "ಕೊನೆಯದಿನಗಳ" ಕವಿಯೆಂದೂ ಖ್ಯಾತರಾಗಿದ್ದಾರೆ.

ಪೈಯವರ ಎಲ್ಲ ಖಂಡಕಾವ್ಯಗಳು ಮಹಾಪುರುಷರ ಸಾವಿನ ಘಟನೆಯನ್ನೇ ವರ್ಣಿಸುತ್ತವೆ. ಇತಿಹಾಸ ಪುರಾಣಗಳಿಂದ ವಸ್ತುವಿನ ಆಯ್ಕೆ ಮಾಡಿ ಅವುಗಳಿಗೆ ಕಾವ್ಯ ಶರೀರವನ್ನು ನೀಡಿದ್ದಾರೆ. ಪೈಯವರಲ್ಲಿ ಖಂಡ ಕಾವ್ಯವನ್ನು ಮಹಾಕಾವ್ಯ ಖಂಡವಾಗಿ ಪರಿಗಣಿಸಬಹುದಾದ ವಿಶಿಷ್ಟ ಲಕ್ಷಣಗಳನ್ನು ಗುರುತಿಸಬಹುದು. ರಸಭಾವನಿರಂತರತೆ ಇನ್ನೊಂದು ಲಕ್ಷಣ. ಸಂಕ್ಷಿಪ್ತತೆಯಲ್ಲಿ ಅವರ ಕಾವ್ಯ ಇನ್ನೂ ಸತ್ವಭರಿತವಾಗುವುದು ಸಾಧ್ಯ. ಪೈಯವರು ಇಡೀ ಖಂಡಕಾವ್ಯವನ್ನು ಕೆಲವು ತುಂಡುಗಳಾಗಿ ವಿಭಜಿಸುತ್ತಾರಾದರೂ, ಇಂಥ ಖಂಡ ಇಂತಿಷ್ಟೇ ಚರಣಗಳಿಂದ ಕೂಡಿರಬೇಕೆಂಬ ಬದ್ಧತೆಯನ್ನೇನೂ ಹೊಂದಿಲ್ಲ. ಗೋವಿಂದ ಪೈಯವರ ವಿಚಾರದಲ್ಲಿ ಹೇಳಿದಷ್ಟು ಮುಗಿಯದು ಒಟ್ಟಿನಲ್ಲಿ ಅವರೊಂದು ಅಪೂರ್ವ ವ್ಯಕ್ತಿ, ಅದ್ಭುತ ವ್ಯಕ್ತಿ.

ಗೊಲ್ಗೊಥಾ–ಕ್ರಿಸ್ತ ಮತ್ತು ಕ್ರೈಸ್ತ ಸಾಹಿತ್ಯಗಳ ವಿಸ್ತಾರವಾದ ಅಧ್ಯಯನದ ಮತ್ತು ಆ ಮೂಲಕ ಕ್ರಿಸ್ತ ಮತ್ತು ಅವನ ಧರ್ಮದ ಬಗ್ಗೆ ತಾಳಿದ ಗೌರವ ಮತಗಳ ಎಲ್ಲೆ ಮೀರಿ ಉತ್ತಮವಾದದ್ದನ್ನು ಗ್ರಹಿಸುವ ಸ್ವೀಕರಿಸುವ ಕವಿ ಮನಸ್ಸಿನ ಔದಾರ್ಯ, ಆರ್ದ್ರತೆಗಳ ಸತ್ಫಲವೆನ್ನಲಡ್ಡಿಯಿಲ್ಲ.

ಬೈಬಲಿನ ಹೊಸ ಒಡಂಬಡಿಕೆಯ ಪ್ರಮುಖ ಗ್ರಂಥಗಳಾದ ಮತ್ತಾಯ, ಮಾರ್ಕ್, ಲೂಕ, ಯೋಹಾನರ ಸುವಾರ್ತೆಗಳು ಯೇಸುವಿನ ಜನನ, ಜೀವನ ಮರಣಗಳ ಮುಖ್ಯ ದಾಖಲೆಗಳಾಗಿ

ವಿಶಿಷ್ಟ ಸಾಹಿತ್ಯ ಪ್ರಕಾರಗಳಿವೆ. ಜೀವನ ಚರಿತ್ರೆ, ಮತೀಯ ಇತಿಹಾಸ ಇಂಥವುಗಳಿಗೆ ಪೂರ್ಣವಾಗಿ ಸಲ್ಲದೆ ಕಥನ ಸಾಮತಿಗಳಿಂದ ಕೂಡಿ ಸಾಹಿತ್ಯ ವಿಮರ್ಶೆಯ ನಿರ್ದಿಷ್ಟ ಪ್ರಶ್ನೆಗಳಿಗೆ ನಿಲುಕದೆಯೂ ಸಾಹಿತ್ಯಾನುಭೂತಿಯನ್ನು ನಿರಂತರ ನೀಡುತ್ತಲೇ ಬಂದಿರುವ ಸುವಾರ್ತೆಗಳು ಸಹಜವಾಗಿಯೇ ಸಾಹಿತ್ಯ ವರ್ಗೀಕರಣದಲ್ಲಿ ತನ್ನದೆ ವಿಶಿಷ್ಟ ಸ್ಥಾನವನ್ನು ಹೊಂದಿರುವಂಥವು.

ಯೇಸುವಿನ ಕಡೆಯದಿನದ ಚಿತ್ರಣದಲ್ಲಿ ಈ ನಾಲ್ಕು ಸುವಾರ್ತೆಗಳ ರಚನಾ ವಿಧಾನದಲ್ಲಿ ಏಕಮುಖತೆ ಇರುವಂಥವಾದರೂ ವಿವರಗಳಲ್ಲಿ ಎಲ್ಲವೂ ಏಕಪ್ರಕಾರವಾಗಿಲ್ಲ. ನಾಲ್ಕರ ಒಟ್ಟು ಗ್ರಹಿಕೆಯಲ್ಲಿ ಸಿಗುವ ಚಿತ್ರವಂತೂ ಸಮಗ್ರವಾದುದು. ಪ್ರತಿಯೊಬ್ಬ ಸುವಾರ್ತೆಕಾರನ ಕೃತಿಯನ್ನು ಅವನ ವಿಶಿಷ್ಟ ಉದ್ದೇಶದ ಹಿನ್ನಲೆಯಲ್ಲಿ ನೋಡುವ ವಿಶ್ಲೇಷಿಸುವ ಆಧುನಿಕ ಕ್ರಮವನ್ನು ಗೌರವಿಸಬಹುದಾದರೂ ಕ್ರಿಸ್ತನ ಬದುಕು ಸಾವಿಗೆ ಸಂಬಂಧಿಸಿದ ಚಿತ್ರಣಕ್ಕೆ ನಾಲ್ಕು ಸುವಾರ್ತೆಗಳನ್ನು ಒಟ್ಟಾರೆ ತರಬೇಕಾದುದು ಉಚಿತವೂ ಅನಿವಾರ್ಯವೂ ಆಗುತ್ತದೆ. ಪೈಯವರು ಸಮರ್ಪಕವಾಗಿ ಮತ್ತು ಸಮರ್ಥವಾಗಿ ನಿರ್ವಹಿಸಿದ್ದು ಈ ಕ್ರೋಢೀಕರಣವನ್ನು ಒಟ್ಟು ೩೭೭ ಸಾಲುಗಳಿರುವ 'ಗೊಲ್ಗೊಥಾ'ದಲ್ಲಿ ೧/೩ ಭಾಗಕ್ಕಿಂತಲೂ ಹೆಚ್ಚಿಗೆ ಎಂದರೆ ೧೪೦ರಷ್ಟು ಸಾಲುಗಳಿಗೆ ಒಂದಿಲ್ಲೊಂದು ಸುವಾರ್ತೆಯ ವಚನಗಳು ಆಧಾರವಾಗಿವೆ. ಇನ್ನೂ ಕೆಲವು ಸಾಲುಗಳಿಗೆ ಬೈಬಲ್ ಅಥವಾ ಇತರ ಗ್ರಂಥಗಳು ಸಮರ್ಥನೆ ಒದಗಿಸಿವೆ. ಯೇಸು ಶಿಷ್ಯರೊಂದಿಗೆ ಮಾಡುವ ಕಡೆಯ ಭೋಜನದಿಂದ ವಿಚಾರಣೆ ಮತ್ತು ಶಿಲುಬೆಯ ಮರಣದವರೆಗೆ ಘಟನೆಗಳು ಕೇವಲ ೨೪ಗಂಟೆಗಳಲ್ಲಿ ಕ್ಷಿಪ್ರವಾಗಿ ಜರಗಿ ಹೋಗುತ್ತವೆ. ಪೈಯವರು ಕಡೆಯ ದಿನದ ಭಾಗಕ್ಕೆ ಸೀಮಿತಗೊಳಿಸಿ ವಿವರಗಳನ್ನು ಒಂದು ಕೇಂದ್ರಕ್ಕೆ ಅಂಟಿಕೊಳ್ಳುವಂತೆ ಅಡಕಗೊಳಿಸಿದ್ದಾರೆ.

**೧.೨ ಪ್ರಬಂಧದ ಉದ್ದೇಶ:**

ಸಂಶೋಧನೆ ಎಂದರೆ ನಿಜದರ್ಶನ ಮಾಡುವ ಪ್ರಕ್ರಿಯೆ ಸಂಶೋಧನ ರಂಗ ನಿರಂತರ ಪರಿವರ್ತನೆಯ ಆಶಯವುಳ್ಳ ಕ್ಷೇತ್ರ. ಹೀಗಾಗಿ ಕಾಲದಿಂದ ಕಾಲಕ್ಕೆ ಬದಲಾವಣೆಗಳು ನಡೆಯುತ್ತಾ ಬಂದಿದೆ. ಸುಧಾರಣೆಯ ಕಾಳಜಿಯುಳ್ಳ ಪ್ರಯತ್ನಗಳು ನಿರಂತರವಾಗಿ ಬೇರೆ ಬೇರೆ ಸಂಶೋಧಕರಿಂದ, ಸಾಹಿತಿಗಳಿಂದ, ಕವಿಗಳಿಂದ ನಡೆದಿದೆ. ಹೀಗೆ ಪ್ರಯೋಗ ಪ್ರಯತ್ನಗಳನ್ನು ಮಾಡಿದವರಲ್ಲಿ ಕೆಲವರು ಸಂಶೋಧನಾ ಕ್ಷೇತ್ರದಿಂದಲೇ ಬಂದವರಾದರೆ, ಇನ್ನೂ ಕೆಲವರು ಒಟ್ಟು

ಸಾಮಾಜಿಕ ಪರಿವರ್ತನೆಯ ತುಡಿತವುಳ್ಳವರಾಗಿ ತೊಡಗಿಸಿಕೊಂಡವರಾಗಿದ್ದು, ಆ ಸಂದರ್ಭದಲ್ಲಿ ಹೊಸತೇನನ್ನೋ ಹೇಳುವ ಬಗೆಗೆ ಚಿಂತನೆ ನಡೆಸಿದವರಿದ್ದಾರೆ. ಸಂಶೋಧನೆಯ ಅನುಭವವು ಕೂಡ ಹಲವರಿಗೆ ಹಲವು ವಿಧದಂತೆ. ಸಂಶೋಧನೆಯ ಸಮಸ್ಯೆಗಳನ್ನು ಧೋರಣೆಗಳನ್ನು ಬಹಳ ತಳಸ್ಪರ್ಶಿಯಾಗಿ ಅಧ್ಯಯನ ನಡೆಸಿದ ಕೆಲವರೂ ಈ ಬಗ್ಗೆ ಸ್ವಯಂ ಚಿಂತನೆಯ ಬೆಳಕನ್ನು ಹರಿಸಿದ್ದಾರೆ. ಕನ್ನಡದ ಸಂದರ್ಭದಲ್ಲಿ ತನ್ನನ್ನು ತಾನು ಬಹುಕ್ಷೇತ್ರಗಳಲ್ಲಿ ಏಕಕಾಲದಲ್ಲಿ ತೊಡಗಿಸಿಕೊಂಡು ಸಾಹಿತ್ಯ- ಇತಿಹಾಸ ಸಂಶೋಧಕರಾಗಿ, ಕವಿಕಾವ್ಯ ವಿಮರ್ಶಕರಾಗಿ, ಕವಿಯಾಗಿ ಭಾಷಾಂತರಕಾರರಾಗಿ, ಬಹುಭಾಷಾ ತಜ್ಞರಾಗಿ ಹೆಸರು ಮಾಡಿದವರು ಗೋವಿಂದ ಪೈಯವರು.

ಪ್ರಸ್ತುತ ಗೋವಿಂದ ಪೈಯವರ 'ಗೊಲ್ಗೊಥಾ' ಮತ್ತು ಬೈಬಲ್-ಒಂದು ತೌಲನಿಕ ಅಧ್ಯಯನವು ತೌಲನಿಕ ಅಧ್ಯಯನದ ಒಂದು ಪ್ರಯತ್ನವಾಗಿದೆ. ಈ ಮೂಲಕ ಗೋವಿಂದ ಪೈಯವರ ಚಿಂತನೆ ಪ್ರಯೋಗಶೀಲತೆಯನ್ನು ಬೈಬಲ್‌ನ ಮೂಲದ್ರವ್ಯದ ಜೊತೆಗಿಟ್ಟು ಪರಿಶೀಲಿಸಲಾಗುವುದು. ಆ ಮೂಲಕ ಕಾವ್ಯದ ವಿಶಿಷ್ಟತೆಯನ್ನು ಮತ್ತು ಅನನ್ಯತೆಯನ್ನು ಶೋಧಿಸುವ ಉದ್ದೇಶವನ್ನು ಹೊಂದಿದೆ. ಈ ಬಗ್ಗೆ ಈ ತನಕ ನಡೆದ ಅಧ್ಯಯನವನ್ನು ಗಮನಿಸಿ ಆಲೋಚನೆಯ ಕ್ಷಿತಿಜವನ್ನು ವಿಸ್ತರಿಸುವ ಪ್ರಯತ್ನವನ್ನು ನಡೆಸಿದ್ದೇನೆ.

'ಗೊಲ್ಗೊಥಾ'ದಲ್ಲಿ ಒಂದು ಅಭೂತಪೂರ್ವ ಆತ್ಮೀಯತೆ ಹರಿದಾಡಿದೆ. ಗೋವಿಂದ ಪೈಯವರಿಗೆ ಕ್ರಿಸ್ತಚರಿತೆ, ಕ್ರೈಸ್ತ ಮತಗಳ ಬಗೆಗೆ ಅಂತರಂಗದಲ್ಲಿ ಗಾಢವಾಗಿ ಇದ್ದ ಒಂದು ಕೋಮಲ ಆತ್ಮೀಯ ಭಾವನೆಯೇ ಈ ಕಾವ್ಯದ ಮೂಲ ಪ್ರೇರಣೆ ಎನ್ನಬಹುದು. ಬೈಬಲನ್ನು ಸಾಹಿತ್ಯಕ ದೃಷ್ಟಿಯಿಂದ ವಿಶ್ಲೇಷಿಸುವುದು ಈ ಅಧ್ಯಯನದ ಇನ್ನೊಂದು ಉದ್ದೇಶವಾಗಿದೆ.

**೧.೩ ಪ್ರಬಂಧದ ವ್ಯಾಪ್ತಿ:**

ಗೋವಿಂದ ಪೈಗಳು ಪ್ರಯೋಗಶೀಲ ವ್ಯಕ್ತಿಯಾದುದರಿಂದ ಅವರ ಪ್ರಯೋಗಗಳು ಹಲವು ಕ್ಷೇತ್ರಗಳನ್ನು ವ್ಯಾಪಿಸಿಕೊಂಡಿವೆ. ಈ ಪ್ರಯೋಗಗಳು ಅನೇಕ ಸಲ ಒಂದಕ್ಕೆ ಇನ್ನೊಂದು ಪೂರಕವಾಗಿಯೂ ನಡೆದದ್ದಿದೆ. ಪ್ರಸ್ತುತ ಅಧ್ಯಯನದ ವ್ಯಾಪ್ತಿ ಗೋವಿಂದ ಪೈಯವರ 'ಗೊಲ್ಗೊಥಾ ಮತ್ತು ಬೈಬಲ್'ನ ಪ್ರಯೋಗಶೀಲತೆಯನ್ನು ಪರಿಚಯ ಮಾಡಿಕೊಡುವುದಾಗಿದೆ. ಆದರೆ ಸಂಶೋಧಕನ ದೃಷ್ಟಿಯಿಂದ ಅವನು ತಲಪುವ ತೀರ್ಮಾನಕ್ಕಿಂತ ಅನುಸರಿಸುವ ಮಾರ್ಗ

ಮುಖ್ಯ. ಹೀಗಾಗಿ ಈ ಸಂಪ್ರಬಂಧದ ವ್ಯಾಪ್ತಿಯು ಬಹಳ ಸ್ಪಷ್ಟವಾಗಿದ್ದು ಇದಕ್ಕೆ ಕೆಲವು ನಿರ್ದಿಷ್ಟ ಗ್ರಂಥಗಳನ್ನು ಮೂಲ ಆಕರವಾಗಿ ಬಳಸಿಕೊಳ್ಳಲಾಗಿದೆ.

ಸಂಶೋಧಕರನ್ನು ನಾವು ಗುರುತಿಸುವುದು ಅವನ ಸಂಶೋಧನಾ ವಿಧಾನದಿಂದ ಅವನು ಸಂಶೋಧನೆಯ ಬಗ್ಗೆ ತಾಳುವ ಧೋರಣೆಯಿಂದ ಅವನ ಎಷ್ಟೋ ತೀರ್ಮಾನಗಳು ಕಾಲವನ್ನು ಗೆದ್ದು ನಿಂತಿವೆಯೆನ್ನುವುದರ ಮೇಲಲ್ಲ ಅವನ ನಿರ್ಣಯಗಳು ಮುರಿದು ಹೊಸ ನಿರ್ಣಯಗಳು ಬರಬಹುದು. ಆದರೆ ಹೊಸ ನಿರ್ಣಯಕ್ಕೆ ಅವನು ಆಸ್ತಿಭಾರವಾಗುತ್ತಾನೆ ಎಂಬುದು ಗಮನಿಸಬೇಕಾದ ಸಂಗತಿ. ಸಂಶೋಧನ ಪದ್ಧತಿ ಯಾವುದೇ ಇರಲಿ, ಆಯಾ ಕಾಲದಲ್ಲಿ ಲಭ್ಯವಿರುವ ಆಧಾರ ಸಾಮಗ್ರಿಯನ್ನು ಬಳಸಿ ನಿರ್ಣಾಯಕದತ್ತ ಸಾಗುವುದು ಸರಿಯಾದ ಮಾರ್ಗ ಎಂದು ಚಿದಾನಂದ ಮೂರ್ತಿಯವರು ಹೇಳುತ್ತಾರೆ.

ಯಾವುದೇ ಸಂಶೋಧಕ ಸೂಕ್ತ ಆಧಾರಗಳು ದೊರೆತಾಗ ಸರಿಯಾದ ನೆಲೆಯನ್ನು ಮುಟ್ಟುವವನಾದರೂ ದುರ್ಬಲ ಸಾಮಾಗ್ರಿಯನ್ನವಲಂಬಿಸಿ ಊಹೆಯ ಮೂಲಕ ಸತ್ಯವನ್ನು ಸ್ಥಾಪಿಸುವಲ್ಲಿ ಅವನ ಸತ್ಯ ಪರೀಕ್ಷೆ ನಡೆಯುತ್ತದೆ, ಎಂದು ಪ್ರಸಿದ್ಧ ಸಂಶೋಧಕನಾದ "ಎಂ.ಎಂ. ಕಲಬುರ್ಗಿ" ಹೇಳುತ್ತಾರೆ.

ಒಟ್ಟಿನಲ್ಲಿ ಈ ಅಧ್ಯಯನವು ಗೋವಿಂದ ಪೈಯವರ 'ಗೊಲ್ಗೊಥಾ ಮತ್ತು ಬೈಬಲ್' ವಿಚಾರಕ್ಕೆ ಸಂಬಂಧಿಸಿದ ವಿಷಯಗಳನ್ನು ವಿಶ್ಲೇಷಣೆ ಮಾಡಿ ಅದರ ಸಾಧ್ಯತೆಗಳನ್ನು ಗುರುತಿಸುವ ಮಾದರಿಯದ್ದಾಗಿರುತ್ತದೆ.

**೧.೪ ಹಿಂದಣ ಅಧ್ಯಯನದ ಹೆಜ್ಜೆಗಳು:**

ಗೋವಿಂದ ಪೈಯವರ ಅಧ್ಯಯನದ ಬೇರೆ ಬೇರೆ ನೆಲೆಗಳು ಕನ್ನಡದಲ್ಲಿ ಅಧ್ಯಯಕ್ಕೆ ಒಳಗಾಗಿದ್ದರೂ ಗೋವಿಂದ ಪೈಯವರ 'ಗೊಲ್ಗೊಥಾ ಮತ್ತು ಬೈಬಲ್'ನ ತೌಲನಿಕ ಅಧ್ಯಯನ ಹಾಗೂ ಅವೆರೆಡರ ನಡುವಣ ಇತ್ಯಾತ್ಮಕ ಮತ್ತು ನೇತ್ಯಾತ್ಮಕ ಮುಖಗಳನ್ನು ಗುರುತಿಸುವ ಕೆಲಸಗಳು ಅಷ್ಟಾಗಿ ನಡೆದಿಲ್ಲ.

ಬಹಳ ಕ್ವಚಿತ್ತಾಗಿ ಅಲ್ಲಲ್ಲಿ ಈ ಬಗೆಯ ಒಂದಷ್ಟು ಚರ್ಚೆ ಚಿಂತನೆ ವಿಮರ್ಶೆಗಳು ನಡೆದಿವೆ ಇದರಲ್ಲಿ ಸ್ವಲ್ಪ ಮಟ್ಟಿಗೆ ಬಹು ವಿಷಯಗಳನ್ನು ಇತಿಮಿತಿಗಳನ್ನು ಬಹಳ ಮುಕ್ತವಾಗಿ ಚರ್ಚಿಸಿರುವುದು ಎಸ್. ಶಿವಾಜಿ ಜೋಯಿಸ್ ಅವರ 'ಆಕಲನ' ಎಂಬ ಕೃತಿ, ಹೆರಂಜೆ ಕೃಷ್ಣಭಟ್ಟ

ಮತ್ತು ಮುರಳೀಧರ ಉಪಾಧ್ಯ ಅವರ "ಗೋವಿಂದ ಪೈ ಎಂಬ ಸಂಶೋಧನ ಸಂಪುಟ", ಎಡ್ವರ್ಡ್ ನೊರೋನ್ಹ ಅವರ 'ಗೊಲ್ಗೊಥಾ'ವನ್ನು ಕುರಿತ ಲೇಖನ, ಡಾ। ಹಾ.ಮಾ. ನಾಯಕ ಅವರ 'ಕನ್ನಡ ಸಾಹಿತ್ಯಜ್ಞರ ಆತ್ಮಕಥನ' ಎಂ.ಎಚ್. ಕೃಷ್ಣಯ್ಯ ಮತ್ತುಜಿ.ಎಸ್. ಸಿದ್ದಲಿಂಗಯ್ಯ ಅವರ 'ಸಾಲುದೀಪ'ಗಳು, ಶ್ರೀನಿವಾಸ ಹಾವನೂರ ಅವರ 'ಹೊಸಗನ್ನಡದ ಅರುಣೋದಯ' ರಾಮದೇವ ಶೆಣೈ ಅವರು ಸಂಪಾದಿಸಿದ 'ದೀವಿಗೆ' (ರಾಷ್ಟ್ರಕವಿ ಗೋವಿಂದ ಪೈ ಸ್ಮಾರಕ ಗ್ರಂಥ) ಮತ್ತು ಆ ಸಂಪುಟಕ್ಕೆ ಬರೆದ 'ಸಂಪಾದಕೀಯ ಟಿಪ್ಪಣಿ'ಗಳು ಈ ಬಗೆಗೆ ಹೆಚ್ಚು ಬೆಳಕು ಚೆಲ್ಲುತ್ತದೆ. ಸುಂದರೇಶನ್ ಅವರು ಬರೆದ 'ಗೊಲ್ಗೊಥಾ ಮತ್ತು ವೈಶಾಖಿ' ವಿಮರ್ಶೆ ಈ ಲೇಖನ ನಿಟ್ಟಿನಲ್ಲಿ ಗಮನಾರ್ಹವಾದದು. ಹಾ.ಮಾ. ನಾಯಕರ 'ಕರ್ನಾಟಕ ಕನ್ನಡ ವಿಷಯ ವಿಶ್ವಕೋಶ'ದ ಲೇಖನಗಳನ್ನು ಇಲ್ಲಿ ಉಲ್ಲೇಖಿಸಬಹುದು. ಇಲ್ಲಿನ ಕೆಲವು ಲೇಖನಗಳಷ್ಟೇ ವಿಮರ್ಶಾತ್ಮಕವಾಗಿದ್ದು, ಉಳಿದಂತೆ ಕೇವಲ ಪರಿಚಯಾತ್ಮಕವಾಗಿ ಅಷ್ಟೇ ಇದೆ.

ಈ ಎಲ್ಲಾ ಅಧ್ಯಯನಗಳನ್ನು ಬಳಸಿಕೊಳ್ಳುತ್ತಾ ಈ ಲೇಖನಗಳು ವ್ಯಕ್ತಪಡಿಸುವ ಅಭಿಪ್ರಾಯಗಳನ್ನು ಜೊತೆಗಿಟ್ಟುಕೊಂಡು ಒಟ್ಟಿನಲ್ಲಿ ಪೈಯವರ ಚಿಂತನೆಯ ಅನನ್ಯತೆಯನ್ನು ವಿಶಿಷ್ಟತೆಗಳನ್ನು, ಅವುಗಳು ನೀಡುವ ಒಳನೋಟಗಳನ್ನು, ಸೂಕ್ಷ್ಮತೆಗಳನ್ನು, ಮಿತಿಯನ್ನು, ತಾತ್ವಿಕವಾಗಿ ವಿವೇಚಿಸುವ ಮಾದರಿಯಲ್ಲಿ ಈ ಅಧ್ಯಯನ ನಡೆಯುತ್ತದೆ.

# ೨. ಗೋವಿಂದ ಪೈಯವರ ವ್ಯಕ್ತಿತ್ವ ಮತ್ತು ಕಾವ್ಯ ನಿರೂಪಣಾ ವಿಧಾನ

## ೨.೧ ಪೈಯವರ ವ್ಯಕ್ತಿತ್ವ

೧೯೫೦ ರ ದಶಕಗಳಲ್ಲೇ ಗೋವಿಂದ ಪೈ ಅವರು ಪುರಾಣ ವ್ಯಕ್ತಿಯಾಗಿದ್ದರು. ಪ್ರಾಸತ್ಯಾಗದ ಧೀರ ನಿರ್ಧಾರವನ್ನು ಕೈಗೊಂಡು ಹೊಸ ರೀತಿಯಲ್ಲಿ ಕವನಗಳನ್ನು ರಚಿಸಿದವರು ಎಂಬ ಕಾರಣ ಒಂದು; ಪಶ್ಚಿಮ ಕರಾವಳಿಯ ಸಣ್ಣ ಊರಿನಲ್ಲಿ ಕುಳಿತು, ಯಾವ ವಿಶ್ವವಿದ್ಯಾನಿಲಯದ ಸಂಬಳ, ಸಾರಿಗೆ, ಸ್ಥಾನಮಾನಗಳ ಬೆಂಬಲವೂ ಇಲ್ಲದೆ ಕನ್ನಡಕ್ಕೆ ಸಂಬಂಧಪಟ್ಟಂತೆ ಸಂಶೋಧನೆ ನಡೆಸಿ ಅಮೂಲ್ಯವಾದ ಕಾಣಿಕೆಗಳನ್ನು ನೀಡಿದವರು ಎಂಬ ಕಾರಣ ಎರಡು; ಸನ್ಮಾನ, ಬಿರುದು ಬಾವಲಿಗಳಿಗಾಗಿ ಜನ ಹಂಬಲಿಸುತ್ತಿರುವ ನಮ್ಮ ಕಾಲದಲ್ಲಿ ಅವುಗಳನ್ನೆಲ್ಲ ನಿರ್ದಾಕ್ಷಿಣ್ಯವಾಗಿ ತಿರಸ್ಕರಿಸಿದ್ದಾರೆ ಎಂಬ ಕಾರಣ ಮೂರು; ತಮ್ಮನ್ನು ನೋಡುವುದಕ್ಕಾಗಿ ಬರುವ ಜನರನ್ನು ದೊಡ್ಡವರು ಸಣ್ಣವರು ಎನ್ನದೆ, ಉದಾರವಾಗಿ ಸತ್ಕರಿಸುತ್ತಾರೆ ಎಂಬ ಕಾರಣ ನಾಲ್ಕು; ಹೀಗೆ ತಿಳಿದ ಕಾರಣಗಳು ನಾಲ್ಕಾದರೆ ತಿಳಿಯದ ಇನ್ನೂ ನಾಲ್ಕಾರು ಕಾರಣಗಳಿಗಾಗಿ ನಮ್ಮ ತಲೆಮೊರೆಯ ವಿದ್ಯಾರ್ಥಿಗಳಿಗೆ ಶ್ರೀ ಮಂಜೇಶ್ವರ ಗೋವಿಂದ ಪೈಗಳ ಹೆಸರೇ ಅದ್ಭುತವಾದ, ಅಗತ್ಯವಾಗಿ ನಾವು ಅರಿಯಲೇಬೇಕಾದ ಒಂದು ವ್ಯಕ್ತಿತ್ವಕ್ಕೆ ಸಂಕೇತಮಂತ್ರವಾಗಿದೆ.

ತಮ್ಮಲ್ಲಿಗೆ ಬಂದ ಹಿರಿಯರಿಗೆ ಕಿರಿಯರಿಗೆ ಎಲ್ಲರಿಗೆ ಗೋವಿಂದ ಪೈಯವರು ಒಂದೇ ಉತ್ಸಾಹದಿಂದ ಕಡಲನ್ನು ತೋರಿಸುತ್ತಿದ್ದರು. ಕಡಲಿನ ಬಗ್ಗೆ, ಅದು ಮನೆಯ ಬದಿಗೇ ಇದ್ದುದರಿಂದ, ಅವರಿಗೆ ಉಪೇಕ್ಷೆ ಅಥವಾ ಅನಾದರ ಹುಟ್ಟಲಿಲ್ಲ. ಬದಲಿಗೆ ಅವರ ಪ್ರೀತಿ ಅದರ ಆ ಬಗ್ಗೆ ಬೆಳೆಯುತ್ತಲೇ ಹೋಗಿತ್ತು. ಹಾಗೆಂದೇ, ತಮ್ಮಲ್ಲಿಗೆ ಬಂದವರು ತಮ್ಮ ಪ್ರೀತಿಯ ವಸ್ತುವನ್ನು ನೋಡದೆ ಹೋಗಬಾರದು ಎಂಬುದು ಅವರ ಆಸೆ. ಈ ವಿಷಯವಾಗಿ ಹಿರಿಯರಾದ ಶ್ರೀ ಮಾಸ್ತಿ ವೆಂಕಟೇಶ ಅಯ್ಯಂಗಾರರು ಹೀಗೆ ಬರೆದಿದ್ದಾರೆ: "ಮನೆಗೆ ಬಂದವರಿಗೆ ತಮ್ಮೂರಿನ ಕಡಲನ್ನು ತೋರಿಸುವುದು ಪೈಯವರ ಒಂದು ಮುಖ್ಯ ಕಾರ್ಯ. ಊರ ಬಳಿಯ ಸಮುದ್ರದಂಥ ಒಂದು ದೊಡ್ಡ ವಸ್ತು ಯಾರು ಅನುಭವಿಸುತ್ತಾರೊ.... ಅದು ಅವರ ಸ್ವಂತ ಆಸ್ತಿ. ಮಂಜೇಶ್ವರದ ಕಡಲು ಕರೆಗಳ ಸೌಂದರ್ಯ ಒಂದು ಅಪೂರ್ವ ರೀತಿಯ ಸೌಂದರ್ಯ ಹರದಾರಿ ಉದ್ದ ನೂರಾರು ಗಜ ಅಗಲದ ಇಂಥ ಮರಳ ಹರವು ಬಹಳ ಕಡೆ ದೊರೆಯಲಾರದು. ಸ್ನೇಹಿತರನ್ನು

ಕರೆದುಕೊಂಡು ಈ ಮರಳ ಮೇಲೆ ನಡೆಯುತ್ತಾ ತಾವು ಸುಖಿಸಿ ಅವರನ್ನೂ ಸುಖ ಪಡಿಸಿದ ಗೋವಿಂದ ಪೈ ಮಂಜೇಶ್ವರದ ಸಮುದ್ರವನ್ನು ತಮ್ಮ ಜೀವನದ ಆಸ್ತಿಯನ್ನಾಗಿ ಮಾಡಿಕೊಂಡಿದ್ದರು".

ಪೈ ಅವರು ಜನಿಸಿದ್ದು ೧೮೮೩ ಯ ಮಾರ್ಚ್ ೨೩ನೆಯ ತಾರೀಖು. ಎಂ. ಗೋವಿಂದ ಪೈ ಎಂಬ ಹೆಸರಿನಲ್ಲಿರುವ ಎಂ. ಮಂಜೇಶ್ವರದ ಮೊದಲಕ್ಷರ ಎಂಬುದಾಗಿ ನಮ್ಮಲ್ಲಿ ಅನೇಕರು ಭಾವಿಸಿದ್ದೆವು. ವಾಸ್ತವವಾಗಿ ಎಂ. ಎಂಬುದು ಮಂಗಳೂರಿನ ಮೊದಲಕ್ಷರ. ಏಕೆಂದರೆ ಮಂಗಳೂರೇ ಇವರ ತಂದೆಯ ಊರು. ಮಂಜೇಶ್ವರ ಇವರ ತಾಯಿಯ ಊರು. ಆದರೆ ಇವರು ಹುಟ್ಟಿದ್ದು, ಬೆಳೆದದ್ದು, ಆ ಮೇಲೆ ಐವತ್ತು ವರ್ಷಗಳಿಗೂ ಹೆಚ್ಚು ಕಾಲ ವಾಸಿಸಿದ್ದೂ ಮಂಜೇಶ್ವರದಲ್ಲೇ. ಅವರು ಕನ್ನಡ ನಾಡಿನಾದ್ಯಂತ ಹೆಸರು ಪಡೆದದ್ದು ಮಂಜೇಶ್ವರದ ಗೋವಿಂದ ಪೈ ಎಂತಲೇ. ಪೈ ಅವರ ತಂದೆಯ ಹೆಸರು ಮಂಗಳೂರ ಸಾವಕಾರ ತಿಮ್ಮ ಪೈ. ನಾಲ್ಕು ಮಂದಿ ಗಂಡು ಮಕ್ಕಳಲ್ಲಿ ಇವರೇ ಹಿರಿಯರು. ತಂದೆ ಸಾಕಷ್ಟು ಅನುಕೂಲಸ್ತರು. ಆದ್ದರಿಂದ ಗೋವಿಂದ ಪೈ ಅವರು ಯಾವುದೇ ಉದ್ಯೋಗವನ್ನು ಅವಲಂಬಿಸಿಯೇ ಜೀವನ ಮಾಡಬೇಕಾದ ಅವಶ್ಯಕತೆ ಬರಲಿಲ್ಲ.

ಪೈ ಅವರ ಬಾಲ್ಯದ ವಿದ್ಯಾಭ್ಯಾಸ ಮಂಗಳೂರಿನಲ್ಲಿ ನಡೆಯಿತು. ಅವರು ಕೆನರಾ ಹೈಸ್ಕೂಲಿನಲ್ಲಿ ಸ್ಕೂಲ್ ಫೈನಲ್ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿದರು. ಮುಂದಿನ ಪದವಿ ವ್ಯಾಸಂಗಕ್ಕೆ ಮದರಾಸಿಗೆ ಹೊದರು. ಆದರೆ ತಂದೆಯವರಿಗೆ ಅನಾರೋಗ್ಯವಾಗಿ ಹಿಂದಕ್ಕೆ ಬಂದರು. ಆಮೇಲೆ ಮತ್ತು ಮದರಾಸಿಗೆ ಹೋಗಿ ವಿದ್ಯಾಭ್ಯಾಸ ಮುಂದುವರಿಸಲಿಲ್ಲ. ಜೀವನದ ಕೊನೆಯವರೆಗೂ ನಿಲ್ಲದ ಗಾಢವಾದ ವ್ಯಾಸಂಗ ಮನೆಯಲ್ಲೇ ಮುಂದುವರಿಯಿತು.

ಸೌಭಾಗ್ಯವತಿ ಕೃಷ್ಣಾ ಅಥವಾ ಲಕ್ಷ್ಮೀದೇವಿ ಎಂಬ ವಧುವಿನೊಡನೆ ಪೈ ಅವರ ವಿವಾಹ ನೆರವೇರಿತು. ತುಂಬ ಸುಖವಾಗಿ ಸಾಗಿದ ಸಂಸಾರ ಬಹಳಕಾಲ ಹಾಗೆ ನಡೆಯಲಿಲ್ಲ. ಕಾರಣ ಅವರ ಹೆಂಡತಿ ಬೇಗ ತೀರಿಕೊಂಡದ್ದು, ಆನಂತರದ ಅವರ ಕೌಟುಂಬಿಕ ಜೀವನದ ಮಧುರ ವ್ರತವನ್ನು ಶ್ರೀ ಮಾಸ್ತಿಯವರು ಸೊಗಸಾಗಿ ನಿರೂಪಿಸಿದ್ದಾರೆ.

"ತಂದೆಯ ಕಾಯಿಲೆಯ ಸುದ್ದಿ ಕೇಳಿ ಪರೀಕ್ಷೆಯನ್ನು ಮುಗಿಸದೆ ಮನೆಗೆ ಬಂದ ಮಗ ಮನೆಯ ಹಿರಿಯನಾಗಿ ನಿಂತು, ಸಂಸಾರವನ್ನು ನೋಡಿಕೊಂಡು ಸೋದರರೊಡನೆ ಬೆಳೆದ ರೀತಿ ಒಂದು ಸುಂದರ ಇತಿಹಾಸ ಆಗುತ್ತದೆ. ಗೋವಿಂದ ಪೈ ಹರೆಯದಲ್ಲೇ ಪತ್ನಿಯನ್ನು

ಕಳೆದುಕೊಂಡರು. ಮರಳಿ ಮದುವೆಯಾಗಲಿಲ್ಲ. ಅವರಿಗೆ ಮಕ್ಕಳಿರಲಿಲ್ಲ. ಆದರೆ ಕುಟುಂಬದಲ್ಲಿ ಬೆಳೆಯುತ್ತಿದ್ದ ತಮ್ಮನ ಮಕ್ಕಳು ಅವರಿಗೆ ತಮ್ಮದೇ ಮಕ್ಕಳೆಂಬಂತೆ ಅಕ್ಕರೆಯ ವಸ್ತುವಾಗಿದ್ದುವು. ಆ ತಮ್ಮಂದಿರೋ ಈ ಅಣ್ಣನನ್ನು ಒಬ್ಬ ದೇವರು ಎಂಬಂತೆ ನೋಡಿಕೊಳ್ಳುತ್ತಿದ್ದರು. ತಮ್ಮ ಸುಬ್ಬರಾಯ ಪೈ ಕೂಡಾ ಪತ್ನಿಯನ್ನು ಕಳಕೊಂಡರು. ಮರಳಿ ಮದುವೆಯಾಗದೆ ಅಣ್ಣನೊಡನೆ ನಿಂತು ಮಕ್ಕಳನ್ನು ಸಾಕಿದರು. ಬಂದವರ ಆತಿಥ್ಯವನ್ನು ಅಣ್ಣನ ಅಧ್ಯಕ್ಷತೆಯಲ್ಲಿ ಈ ತಮ್ಮ ನಡೆಸುತ್ತಿದ್ದ ಸೊಗಸೇ ಒಂದು ಸೊಗಸು. ಈ ವ್ಯವಹಾರದಲ್ಲಿ ಸುಬ್ಬರಾಯ ಪೈ "ಮಾರ್ಥ" ಆದರೆ ಅನಂತ ಪೈ "ಮೇರಿ" ಹೀಗೆ ಇಬ್ಬರು ತಮ್ಮಂದಿರೂ ಅಣ್ಣನೊಂದಿಗೆ ನಮ್ಮ ಸಮಾಜದ ಸುಸ್ಪಷ್ಟ ಕುಟುಂಬಗಳ ಜೀವನದ ಒಂದು ಸುಂದರ ಆದರ್ಶವನ್ನು ಸಾಧಿಸಿ ತೋರಿಸಿದರು.

"ಮನೆಯ ಮಹಡಿಯ ನಡುಸಾಲೆಯೆ ಗೋಡೆಯ ಮೇಲೆ ಗೋವಿಂದ ಪೈ ಅವರ ಪತ್ನಿಯವರ ಚಿತ್ರವೊಂದನ್ನು ತೂಗಿಸಿರುವರು. ಗೋವಿಂದ ಪೈ ದಿನವೂ ಬೆಳಗಾತ ತೋಟದಲ್ಲಿ ಸುತ್ತುವ ಹೊತ್ತು ಎರಡು ಹೂವನ್ನು ಬಿಡಿಸಿ ತಂದವರು, ಆ ಚಿತ್ರಕ್ಕೆ ಕುಂಕುಮ ಹಚ್ಚಿ ಆ ಹೂವನ್ನು ಒಪ್ಪಿಸುವರು. ಆ ಮನುಷ್ಯನ ಚೇತನದಲ್ಲಿ ಎಷ್ಟು ಪ್ರೇಮ ಇತ್ತು, ಎಂತ ಧ್ಯೇಯ ಇತ್ತು, ಎನ್ನುವುದನ್ನು ತೋರಿಸುವುದಕ್ಕೆ ಈ ಒಂದು ಮಾತು ಸಾಕು".

ಪೈ ಅವರ ಪತ್ನಿ ತೀರಿಕೊಂಡದ್ದು ೧೯೩೩ರಲ್ಲಿ ಅವರು ಇರುವವರೆಗೂ ಸಂಸಾರ ಅಚ್ಚುಕಟ್ಟಾಗಿ ನಡೆಯಿತು. ಆನಂತರ ಅಚ್ಚುಕಟ್ಟಾಗಿ ನಡೆಯಲ್ಲಿಲ್ಲ ಎಂದಲ್ಲ. ಆ ಮನೆಯಲ್ಲಿ ಪೈ ಅವರಿಗೆ ಸಹಧರ್ಮಿಣಿಯ ಸ್ಥಾನ ಕೊರತೆಯಾಗಿ ಉಳಿಯಿತು. ಸತಿ ಕೂಡ ಏಳೆಂಟು ಭಾಷೆಗಳ ಒಡತಿಯರಾಗಿದ್ದರಂತೆ! ಸದಾ ಖಾಯಿಲೆಯಿಂದ ನರಳುತ್ತಿದ್ದವರು ಅವರು. ಆದರೆ ಅದನ್ನು ತೋರಗೊಡದೆ ಮನೆಯನ್ನು ಬೆಳಗಿದವರು.

ಪೈ ಅವರಿಗೆ ಬಾಲ್ಯದಿಂದಲೇ ಗುಣಪಡಿಸಲಾರದ ಎರಡು ತೀವ್ರ ಸ್ವರೂಪದ ಚಟಗಳು ಅಂಟಿಕೊಂಡು ಬಿಟ್ಟಿದ್ದವು. ಒಂದು ಕವನಿಸುವುದು; ವಿಶಾಲಾರ್ಥದಲ್ಲಿ ಸಾಹಿತ್ಯ ಸೃಷ್ಟಿ, ಎರಡನೆಯದು ವಿದ್ವತ್ತನ್ನು ಸಂಪಾದಿಸುವುದು. ಮೊದಲನೆಯದು ಪ್ರಾರಂಭವಾದ ರೀತಿಯನ್ನು ಅವರೇ ಹೇಳಿಕೊಂಡಿದ್ದಾರೆ:

"ಜಯ ಸಂವತ್ಸರದ ಮಾಘ ಮಾಸದ ಕೊನೆಯವಾರ, ೧೮೯೫ನೆಯ ಇಸವಿಯ ಫೆಬ್ರವರಿ ತಿಂಗಳಿನದೂ ಕೊನೆಯವಾರ. ಮಂಗಳೂರಿನಲ್ಲಿ ನಮ್ಮ ಮನೆಯಲ್ಲಿ ತಮ್ಮನ ನೂಲುಮದುವೆಗೆ ಸಮೀಪಿಸಿದೆ. ಚಪ್ಪರ ಹಾಕಿದೆ ಫೆಬ್ರವರಿಯಲ್ಲಿ ಎಂದೂ ಇಲ್ಲದ ಮಳೆ ಜಿನುಗುತ್ತಿದೆ. ಅಂದು

ಶನಿವಾರವೊ, ರವಿವಾರವೊ, ಅಥವಾ ಪ್ರಾಯಶಃ ಶಿವರಾತ್ರಿಯೊ, ಹೇಗೂ ಸಾಲೆ ಇಲ್ಲದ ದಿನ ಚಪ್ಪರದಲ್ಲಿ ಒಂದು ಕಡೆಯಲ್ಲಿ ಲಡ್ಡುಗೆಗಳನ್ನು ಕಟ್ಟುತ್ತಾರೆ. ಮತ್ತೊಂದು ಕಡೆ ಮಂಡಿಗೆಗಳನ್ನು ಮಡಚುತ್ತಾರೆ. ಬೇರೊಂದು ಕಡೆ ಸೇವಿಗೆಯನ್ನು ಒತ್ತುತ್ತಾರೆ. ಜೋಳದ ಗದ್ದೆಯಲ್ಲಿ ಗಿಳಿಗಳ ಕೋಲಾಹಲದಂತೆ ಚಪ್ಪರವೆಲ್ಲಾ ಗದ್ದಲ. ಆ ನಡುವೆ ಕುಗ್ಗಿದ ಕೊರಳಲ್ಲಿ ಇದೊಂದು ಹಾಡು ಕೇಳಿಸಿತು.

ಅಡವಿಗೆ ಪೋಪರೆನೆ । ಕಂದಯ್ಯ ॥ಪಲ್ಲ॥
ಅಡವಿಯೊಳಗೆ ಬಲು । ಕಡುಖೂಳ ಮೃಗಗಳು
ಬಿಡದೆ ಬಾಧಿಪವೊ ನಿನ್ನ ॥ ಅನು॥

"ಅಗ್ಗೆ ನನಗೆ ಏನಾಯಿತೊ, ಏನು ತೋಚಿತೊ ದೇವರೆ ಬಲ್ಲ. ಮತ್ತು ಚಪ್ಪರದ ಗವುಜು ನನಗೆ ಕೇಳಿಸಲಿಲ್ಲ. ನೆಟ್ಟಗೆ ಹೋದೆ, ಅಭ್ಯಾಸದ ಪುಸ್ತಕವನ್ನು ಹಿಡಿದು ಬರೆಯತೊಡಗಿದೆ. ಇಂದಿನ ಮಾತಿನಲ್ಲಿ ಏಕಾಂಕ ನಾಟಕ ಎನ್ನಬಹುದಾದ ಒಂದು ನಾಟಕವನ್ನು ಇಳಿಹೊತ್ತಿನೊಳಗೆ ಬರೆದು ಮುಗಿಸಿದೆ ಅದಾದ ೨–೩ ದಿನಗಳಲ್ಲಿ ಅಂತಹುದೇ ಮತ್ತೊಂದು ನಾಟಕವನ್ನು ಬರೆಯಹತ್ತಿದೆ. ಆದರೆ ಅದನ್ನು ಕೊನೆಗೂ ಮುಗಿಸಿಲ್ಲ. ಆ ನಾಟಕಗಳಲ್ಲಿ ಬರೇ ಮಾತು ಹಾಡುಗಳಲ್ಲಿದೆ ವೃತ್ತ–ಕಂದಗಳೂ ಇಲ್ಲ, ಒಂದೋ ಅಥವಾ ಎರಡೊ ನೋಟಗಳಲ್ಲದೆ ಹೆಚ್ಚಿಗೆ ನೋಟಗಳೂ ಇಲ್ಲ. ಅವಕ್ಕೆ ಹೆಸರಿಕ್ಕಲೂ ಇಲ್ಲ. ಮುಗಿಸಿದ ನಾಟಕದಲ್ಲಿ ತಾಯಿ ತಂದೆಯರ ಒಬ್ಬನೇ ಮಗನು ಕಾಡಿಗೆ ಹೋಗುತ್ತಾನೆ, ಹೋಗಬಾರದೆಂದು ಅವರು ಅಂಗಲಾಚಿ ಬೇಡುತ್ತಾರೆ. ಕೇಳಿದ ಹಾಡಿಗೂ ಬರೆದ ನಾಟಕಕ್ಕೂ ಭೇದವಿಷ್ಟೇ, ಅದು ತತ್ಸಮ, ಇದು ತದ್ಭವ. ಮುಗಿಸಿದ ನಾಟಕದ ಕಥೆ ಇಳಿಯಷ್ಟಾದರೂ ನೆನಪಿಗೆ ಬಾರದು. ಹೀಗೆ ಸಾಹಿತ್ಯ ಮಂದಿರದ ಹೊಸ್ತಿಲಲ್ಲಿ ಅಕಾಂಡವಾಗಿ ಎಡವಿದೆ, ಮುಚ್ಚು ಕದಕ್ಕೆ ಡಿಕ್ಕಿ ಹೊಡೆದೆ, ಅಗಳಿ ಇಲ್ಲದ ಬಾಗಿಲು ಹಾರಿತು, ಒಳ ಹೊಕ್ಕೆ, ನನ್ನ ಜೀವಮಾನದಲ್ಲಿ ಅದೊಂದು 'ಅಮಗ' ನೆನಹಿನ ಹಚ್ಚೆ ಚುಚ್ಚಿದಂತಿರುವ ಆ ದಿನವನ್ನು ಎಂದಿಗೂ ಮರೆಯುವಂತಿಲ್ಲ".

ಆನಂತರ ಮಂಜೇಶ್ವರದಲ್ಲಿ, ತಮ್ಮ ತಾಯಿಯ ಮನೆಯಲ್ಲಿ ಬೇಕಾದಷ್ಟು ಯಕ್ಷಗಾನಗಳನ್ನು ಪೈ ಅವರು ಕಂಡರು. ೧೮೯೩ ರಲ್ಲಿ ಅವರು 'ಮಕರಾಕ್ಷನ ಕಾಳಗ' ಎಂಬ ಒಂದು ಯಕ್ಷಗಾನವನ್ನು ಬರೆಯಲು ತೊಡಗಿದರಂತೆ. ಮಕರಾಕ್ಷ ಯಾರು ಎಂದು ಪೈ ಅವರಿಗೂ ತಿಳಿಯದು! ಅಂತೂ ಅವನನ್ನು ಶ್ರೀರಾಮ ಸಂಹರಿಸುತ್ತಾನೆ. ಮೂರನೆಯ ಒಂದು ಪಾಲು ಬರೆದು ಅದು ಮನಸ್ಸಿಗೆ ಸರಿಹೋಗದೆ ಹರಿದುಬಿಟ್ಟರಂತೆ.

**೨.೨ ಕಾವ್ಯ ನಿರೂಪಣಾ ವಿಧಾನ:**

ಪೈ ಅವರು ಕವನಿಸ ಹತ್ತಿದ ಕಥೆ ಸ್ವಾರಸ್ಯವಾಗಿದೆ. ಅವರ ಮಾತುಗಳಲ್ಲೇ ಅದನ್ನು ಕೇಳಬೇಕು: "ಈ ನಡುವೆ ೧೮೯೬ ರಲ್ಲೇನೋ ಹೀಗಾಯಿತು. ಆ ಚಿಕ್ಕಂದಿನಲ್ಲಿ ಒಮ್ಮೆ ನಮ್ಮಲ್ಲಿ ಸೋದರರೊಳಗೆ ಜಗಳ ಹತ್ತಿದಾಗ ನನ್ನಲ್ಲಿ ಸಿಟ್ಟಿಗೆದ್ದ ನನ್ನ ತಮ್ಮಂದಿರು ನಾನು ಕವನಿಸುತ್ತೇನೆಂದು ನಮ್ಮ ತಾಯಿಯೊಂದಿಗೆ ದೂರಿತ್ತರು. ನಮ್ಮ ತಾಯಿ ತೀರ ಹಳಬಳಕೆಯ ನೇಮವಂತೆ, ತುಳುನಾಡಿನ ಸರ್ವಶ್ರೇಷ್ಠ ಯಕ್ಷಗಾನ ಕವಿಯಾದ ಮುಲ್ಕಿಯ ವಾಸುದೇವ ಪ್ರಭು ಎಂಬವರು "ಬಿಲ್ಲಹಬ್ಬ'ವನ್ನು ರಚಿಸುತ್ತಲೆ ಅವರಿಗೆ ಹುಚ್ಚು ಹಿಡಿಯಿತು. ಅನಂತರ 'ಸಮುದ್ರ ಮಥನ'ವನ್ನು ರಚಿಸಿದ ಮೇಲೆ ಅವರ ಹುಚ್ಚು ತಿಳಿಯಿತು. ಆತ ಏವ ಕವನಿಸಿದರೆ ಹುಚ್ಚು ಹತ್ತುತ್ತದೆಂದು ಮನಸಾರೆ ನಂಬಿದ್ದ ನಮ್ಮ ತಾಯಿ ಅದನ್ನು ಕೇಳುತ್ತಲೇ ನನ್ನಲ್ಲಿ ರೇಗಿ ಕವನಿಸುವ ಹುಚ್ಚನ್ನು ಬಿಡಿಸಲೆಂದು ನನ್ನನ್ನು ದಂಡಿಸಿದರು. ಅಂದಿನಿಂದ ಕೆಲಕಾಲ ಮನೆಯಲ್ಲಿ ಕವನಿಸಲಾರದೆ, ನಿದ್ದೆ ಬಂದರೆ ಗದ್ದೆಯಲ್ಲಿ ಮಲಗಬಹುದೆಂದು, ಮರಮರಕ್ಕೆ ತೊಟ್ಟಿಲು ಕಟ್ಟುತ್ತ ಹೋಗುತ್ತಿರುವ ತಿರುಕಿಯಂತೆ ನಡೆದಾಡುವಾಗ ಬೀದಿಯಲ್ಲೂ ಬಿಡುವಾದಾಗ ಸಾಲೆಯಲ್ಲೂ ಕವನಿಸುತ್ತಿದ್ದೆ".

ಪೈ ಅವರು ಮುಂದೆ ೧೮೯೯ ರಲ್ಲಿ ಷೇಕ್ಸ್‌ಪಿಯರ್ ಕವಿಯ 'ಟ್ವೆಲ್ತ್ ನೈಟ್' ನಾಟಕದ ಕೆಲವು ನೋಟಗಳನ್ನು ವೃತ್ತ-ಕಂದಕಗಳಲ್ಲಿ ಕನ್ನಡಿಸಿದರು. 'ರಾಮಾಶ್ವಮೇಧ' ಪ್ರಖ್ಯಾತಿಯ 'ಮುದ್ದಣ' ಕಾವ್ಯನಾಮದ ಶ್ರೀ ನಂದಳಿಕೆ ಲಕ್ಷ್ಮೀನಾರಣಪ್ಪನವರಿಗೆ ಅದನ್ನು ಕಳುಹಿಸಿದರು. ಅವರು ಬೆನ್ನುತಟ್ಟಿ 'ಮುಂದುವರಿಸುವಂತೆ' ಪ್ರೋತ್ಸಾಹಿಸಿದರು. ಶ್ರೀ ಪಂಜೆ ಮಂಗೇಶರಾಯರು ಪೈಗಳಿಗೆ ಉಪಾಧ್ಯಾಯರಾಗಿ ದೊರೆತ ಮೇಲೆ ಕವನಗಳಲ್ಲಿ ಪ್ರಾಸವನ್ನು ಬಿಟ್ಟರೆ ಹೇಗೆ? ಎಂದು ಅವರನ್ನು ಪ್ರಶ್ನಿಸಿದರು. ಸಮರ್ಪಕವಾದ ಉತ್ತರ ದೊರೆಯಲಿಲ್ಲ ೧೯೧೧ ನೆಯ ಇಸವಿಯಲ್ಲಿ ಯವುದೋ ಕಾರಣಕ್ಕೆ ಬಡೋದಾ ರಾಜ್ಯದ ನವಸಾರಿ ಎಂಬಲ್ಲಿದ್ದಾಗ ಪ್ರಾಸತ್ಯಾಗದ ಧೀರ ನಿಶ್ಚಯನ್ನು ಕೈಗೊಂಡರು. ಅನುವಾದಗಳೂ ಸ್ವತಂತ್ರ ಕವನಗಳೂ ಹೊರಬಿದ್ದವು. ಪಾಶ್ಚಾತ್ಯ ಸಾಹಿತ್ಯದ ಪ್ರಭಾವದಿಂದ ಅನೇಕ ಅನುವಾದಿತ ಹಾಗೂ ಸ್ವತಂತ್ರ ಕೃತಿಗಳೂ ರಚಿತವಾದವು. ಅನೇಕ ಸಂಶೋಧನ ಲೇಖನಗಳನ್ನು ರಚಿಸಿದರು. ಕವಿಯೆಂದು, ನಾಟಕಕಾರರೆಂದು,

ಸಂಶೋಧಕರೆಂದು, ಮಹಾವಿದ್ವಾಂಸರೆಂದು, ಬಹುಭಾಷಾ ವಿಶಾರದರೆಂದು ಪೈ ಅವರು ಖ್ಯಾತಿಗಳಿಸಿದರು.

ಸಾಹಿತ್ಯವನ್ನು ಕುರಿತು ಪೈ ಅವರ ಅಭಿಪ್ರಾಯ ಸ್ಪಷ್ಟವಾಗಿತ್ತು. "ಈ ಸಂಸಾರದಲ್ಲಿ ಸಾಹಿತ್ಯವು ಕಪ್ಪಾನೆ ನಿಕಷದಲ್ಲಿ ತೊಳಗುತ್ತಿರುವ ಚಿನ್ನದ ಒರೆಯಂತಿರಬೇಕು. ದಪ್ಪಾನೆ ಮುಗಿಲಲ್ಲಿ ಬೆಳಗುತ್ತಿರುವ ಮಿಂಚಿನ ಗೆರೆಯಂತಿರಬೇಕು. ಆ ಸಾಹಿತ್ಯವು 'ಸತ್ಯಂ ಶಿವಂ ಸುಂದರಂ' ಆಗಿರಬೇಕು. ಇವಲ್ಲಿ ಮಧುರವೂ, ಲಿಖಿತವೂ, ಶಾಂತವೂ, ಶೃಂಗಾರವೂ, ಹಾಸ್ಯವೂ, ವೀರವೂ, ರುದ್ರವೂ ಮೊದಲಾದ ಗುಣಗಳೆಲ್ಲವೂ ಅಡಕವಾಗಿವೆ. ಮಳೆವಿಲ್ಲಿನ ಏಳು ಬಣ್ಣಗಳ ಬೆರಕೆಯಿಂದ ನೇಸರಿನ ಬೆಳಕಾಗುವಂತೆ, ಇವೆಲ್ಲವೂ ಕೂಡಿದಲ್ಲೇ ಸಾಹಿತ್ಯ.

ಗೋವಿಂದ ಪೈ ಚಿತ್ರವನ್ನು ನೋಡಿದರೆ, ಮನಸ್ಸಿನಲ್ಲಿ ಅವರ ಚಿತ್ರ ಮೂಡಿದರೆ ಅವರು ತುಂಬ ಗಂಬೀರವಾಗಿ ತೋರುತ್ತಾರಷ್ಟೆ. ಅವರು ತುಂಬ ಮಡಿವಂತರು ಎಂಬ ಭಾವನೆ ಬರಲಿಕ್ಕೂ ಸಾಕು. ಆದರೆ ಅವರ ಹೃದಯ ವಿಶಾಲವಾದದ್ದು. ಬದುಕಿನ ವಿಷಯಕ್ಕೆ ಹೇಗೋ ಸಾಹಿತ್ಯದ ವಿಷಯಕ್ಕೂ ಅವರ ಹೃದಯ ವಿಶಾಲವಾದದ್ದು. ಬದುಕಿನ ವಿಷಯಕ್ಕೆ ಹೇಗೋ ಸಾಹಿತ್ಯದ ವಿಷಯಕ್ಕೂ ಅವರ ದೃಷ್ಟಿ ಉದಾರವಾದದ್ದಾಗಿತ್ತು. ಸಾಹಿತ್ಯದಲ್ಲಿ 'ಅಶ್ಲೀಲ'ದ ಪ್ರಶ್ನೆಯನ್ನು ಎತ್ತಿಕೊಂಡು ಅವರು ಹೇಳುತ್ತಾರೆ:

"ಸಾಹಿತ್ಯದಲ್ಲಿ ಮಾನುಷಕವಾದ ಎಲ್ಲದಕ್ಕೂ ಎಡೆ ಇರಬೇಕು, ಕೊನೆಗೆ ಅಶ್ಲೀಲಕ್ಕೂ ಸ್ಥಾನವಿರಬೇಕು. ಮನುಷ್ಯನ ಹುಟ್ಟೇ ಅಶ್ಲೀಲದಿಂದ ಆಗಿರುವಲ್ಲಿ, ಪ್ರಕೃತಿಗೆತ್ತಿದ ಛಾಯಾಗೃಹದಂತಿರುವ ಸಾಹಿತ್ಯದಿಂದ ಅಶ್ಲೀಲವನ್ನು ತೊಡೆದು ಬಿಡುವುದಾದರೂ ಹೇಗೆ? ಆದರೆ ಅಶ್ಲೀಲದ ಸೊಗಡು ಹದ ಮೀರಬಾರದು, ಅದಕ್ಕೆ ಆ ತಕ್ಕ ಮರ್ಯಾದೆ ಇರಬೇಕು. ಕಾಡಾಡಿಯಾದರೂ ಸೊಪ್ಪಿನ ಕಚ್ಚೆ ಕಟ್ಟಿಕೊಳ್ಳುವಂತೆ, ಅದನ್ನೆಲ್ಲ ಒಳಗೊಂಡು ಸಾಹಿತ್ಯವು ಸರ್ವತೋಮುಖವಾಗಿ ಸರ್ವತೋಭದ್ರವಾಗಿ ಸಾಗಬೇಕು. ಇದೇ ನನ್ನ ಎಚ್ಚರ ಕನಸು".

ಶ್ರೀ ಪೈ ಅವರು ಕನ್ನಡಕ್ಕೆ ಬೇಕಾದಷ್ಟು ಸೇವೆ ಸಲ್ಲಿಸಿದರು. ಈ ಸಂಪುಟದ ಉಳಿದ ಭಾಗವೆಲ್ಲ ಅವರ ಸಾಹಿತ್ಯ ಸೇವೆಯ ಗುಣ ದೋಷಗಳ ನಿರೂಪಣೆಯಾಗುತ್ತದೆ. ಆದರೆ ಅವರಿಗೆ ಇದ್ದ ಒಂದು ಕೊರತೆಯ ಉಲ್ಲೇಖ ಇಲ್ಲಿ ಮಾಡಬೇಕು. ಅದು ಅವರ ಮನೆಮಾತಾದ ಕೊಂಕಣಿಯನ್ನು ಕುರಿತದ್ದು. ಕೊಂಕಣಿಯಲ್ಲಿ ಸಾಹಿತ್ಯ ಸೃಷ್ಟಿ ಮಾಡಲಾರದೇ ಹೋದೆನಲ್ಲ ಎಂದು ಬೇಸರಿಸಿ ನುಡಿಯುವಾಗಲೂ ಯಾರಿಗೇ ಆದರೂ ಕನ್ನಡದ ಬಗ್ಗೆ ಅಭಿಮಾನ ಮಾಡುವಂತೆ

ನುಡಿದಿದ್ದಾರೆ. ಬೊಂಬಾಯಿ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಭಾಷಣದಲ್ಲಿ ಈ ನೋವನ್ನು ತೋಡಿಕೊಂಡಿದ್ದಾರೆ, ಕನ್ನಡದ ಪ್ರೇಮುವನ್ನು ಉಕ್ಕಿಸಿದ್ದಾರೆ.

"ನಾನು ಎರಡು ತಾಯಂದಿರ ಕೂಸು. ಕೊಂಕಣಿ ನನ್ನ ಹೆತ್ತ ತಾಯಿ, ಕನ್ನಡ ಸಾಕುತಾಯಿ, ನನ್ನನ್ನು ಸಾಕಿದ ತಾಯಿ ಕೊಂಕಣಿಯಲ್ಲಿ ಹೆಸರಿಗೆ ತಕ್ಕಷ್ಟರ ಸಾಹಿತ್ಯವಿದ್ದರೆ ಸಾಕಿತ್ತು..... ನಾನು ನನ್ನ ತಾಯ್ನುಡಿಯಲ್ಲಿ ತಾನೆ ರಚಿಸುತ್ತಿದ್ದನೇನೋ. ಆದರೆ ತಾಯಿಯ ಮೊಲೆಯಲ್ಲಿ ಹಾಲಿಲ್ಲ. ಕೊಂಕಣಿಯಲ್ಲಿ ಸಾಹಿತ್ಯವಿಲ್ಲ. ಆಕೆ ಆ ಬಗ್ಗೆ ನನ್ನನ್ನು ಕನ್ನಡದ ಮೊರೆಯಲ್ಲಿ ಹಾಕಿದಳು. ಈ ತಾಯಿಯಾದರೆ ಪಯಸ್ವಿನಿ. ಎಷ್ಟು ಕಾಲದಿಂದ ಎಷ್ಟೋ ಕವಿಗಳನ್ನು ಉಡಿಸಿಯೂ ಮತ್ತು ಬತ್ತದ ದೇವರ ದಯೆಯಿಂದ ಸರ್ವದಾ ಬತ್ತಬಾರದ ಸದಾಸ್ನುಹಿ ತನ್ನ ಮೊಲೆಯನ್ನು ಆಕೆ ತಾಯಿಗೂ ಮಿಕ್ಕ ಅಳ್ತಿಯಿಂದ ನನಗೆ ಉಣಿಸಿದಳು. ಆಕೆಯ ಅಕ್ಕರೆಯ ಸಾಲವನ್ನು ಏಳೇಳು ಜನ್ಮಕ್ಕೆ ತೆತ್ತು ತೀರಿಸಲಾರೆ".

ಗೋವಿಂದ ಪೈ ಅವರು ತಮ್ಮ ಕಾವ್ಯ ಪ್ರತಿಭೆಯನ್ನು ಯಾವ ಪಂಥ ಇಲ್ಲವೇ ಪ್ರಚಾರಕ್ಕೂ ಒತ್ತೆಯಿಟ್ಟವರಲ್ಲ. ಅದರಲ್ಲಿ ಸಾಂಪ್ರದಾಯಿಕವಾದ ಶ್ರದ್ಧೆ ಮತ್ತು ಆಧುನಿಕ ಪ್ರಜ್ಞೆಗಳೆರಡೂ ಸಹಜವಾಗಿ ಮೇಳವಿಸಿಕೊಂಡು ಬಂದಿರುತ್ತವೆ. ಆದ್ದರಿಂದ ಅವರಲ್ಲಿ ಜಾಗೃತವಾಗಿ ತೋರಿಬರುವ ಆಧ್ಯಾತ್ಮಿಕ ದೃಷ್ಟಿ ಹೇಗೆ ಸರ್ವಜನಾದರಣೀಯವಾಗಿದೆಯೆನ್ನುವುದನ್ನು ಅವರ ಕೆಲವು ಕವನಗಳಿಂದ ಗ್ರಹಿಸಬಹುದು. 'ಪಂಢರಪುರದ ವಿಠೋಬ'ನನ್ನು ಮೊದಲ್ಗೊಂಡು ಯರೂಸಲೇಮಿನ ಯೇಸುಕ್ರಿಸ್ತನವರೆಗೆ ಅವರ ಆಧ್ಯಾತ್ಮಿಕ ದಾರೆ ಪ್ರವಹಿಸಿದೆ. ಅವತಾರ ಪುರುಷರಾದ ಶ್ರೀ ಕೃಷ್ಣ ಮತ್ತು ಬುದ್ಧರಲ್ಲಿ ಅವರಿಗೆ ಸಮಾನ ಭಾವನೆ. ಅವರ ಭಕ್ತಿ ಪ್ರತಿಪಾದನೆಯೂ ವಿಶಿಷ್ಟವಾದುದು. ಪಂಢರಪುರದ ವಿಠೋಬನ ಎದುರಿನಲ್ಲಿ ನಿಂತು, ಅವರ ಭಕ್ತರನ್ನೆಲ್ಲ ಸ್ಮರಿಸಿ ಅವರನ್ನು ಸಲಹಿದಂತೆಯೇ ತನ್ನನ್ನು ಕಾಪಾಡಬೇಕೆಂದು ಕೇಳಿಕೊಳ್ಳುವ ವೈಖರಿಯ ವೈಭವವೇ ಬೇರೆ. ಆ ದೇವನ ಭಂಗಿಯನ್ನು ಕಂಡು "ನಡುವಲಿ ಕೆಯ್ಮಡಗುತ ನಿಡುನಿಂತೆ. ಕೃತಕೃತ್ಯನೊಲೆನ್ನ ಕಾವಮುಂತೆ ಮುಗಿವುದೆಂತು ನಿನ್ನ ಕೆಲಸವಂತೆ?" ಎಂದು ವಿನಂತಿಮಾಡಿಕೊಳ್ಳುವ ವಿಧಾನ ವಿನೂತನವಾದುದು. ಇಟ್ಟಿಗೆಯ ಮೇಲೆ ನಿಂತಿರುವ ಸ್ವಾಮಿಯನ್ನು ನೋಡಿ 'ಹಳಸಿರದೆ ಅಂದಿನಿಟ್ಟಿಗೆ ನಿನ್ನ? ನೋಡ ಜೀಯ ತಂದಿದೆ ಹೊಸತನ್ನ ಮೆಟ್ಟಿ ನಿಲ್ಲು ನಿಷ್ಟುರ ಮನಮೆನ್ನ" ಎಂಬ ಪ್ರಾರ್ಥನೆ ಎಷ್ಟು ಚಿತ್ತಾಕರ್ಷಕವಾಗಿದೆಯೋ ಅಷ್ಟೇ ಭಾವಪೂರ್ಣವಾಗಿದೆ. ಇತರರು ದೇವರಿಗೆ

ಹಣ್ಣುಕಾಯಿಗಳನ್ನು ನೀಡಬಯಸಿದರೆ, ಪೈ ಅವರು ಪರಮಾತ್ಮನಿಗೆ ತಮ್ಮ ನಿಷ್ಠುರ ಮನವೆಂಬ ಇಟ್ಟಿಗೆಯನ್ನೇ ನೀಡಲು ಸಿದ್ಧರಾಗಿರುವುದು ಅತ್ಯಂತ ಆತ್ಮೀಯವಾಗದೆ? ಎಲ್ಲಿಯ ಕೃಷ್ಣ – ಎಲ್ಲಿಯ ಕ್ರಿಸ್ತ? ಆದರೆ ಗೋವಿಂದ ಪೈ ಅವರ ಆಧ್ಯಾತ್ಮಿಕ ಪ್ರಜ್ಞೆಗೆ ಆ ಇಬ್ಬರೂ ಒಂದೇ ಶಕ್ತಿಯ ಎರಡು ಅವತಾರಗಳೆಂಬ ಪೂಜ್ಯ ಭಾವನೆ! ಸಂಪ್ರದಾಯಬದ್ಧವಾದ ಧಾರ್ಮಿಕ ಪ್ರಪಂಚದಲ್ಲಿ ಇದಕ್ಕಿಂತಲೂ ಕ್ರಾಂತಿಕಾರಕವಾದ ತರ್ಕವನ್ನು ಹೂಡಲು ಸಾಧ್ಯವೇ? ಪೈಯವರು 'ಯೇಸು ಕೃಷ್ಣ' ಎಂಬ ಕವಿತೆಯಲ್ಲಿ ಈ ಅಸದೃಶ ಸಾಮ್ಯವನ್ನು ಎತ್ತಿ ತೋರಿಸಿದ್ದಾರೆ. ಕೃಷ್ಣನು ಸೆರೆಮನೆಯಲ್ಲಿ ಹುಟ್ಟಿದರೆ, ಯೇಸುವು ದನದ ಕೊಟ್ಟಿಗೆಯಲ್ಲಿ ಹುಟ್ಟಿದವನು. ಒಬ್ಬ ಕೊಳಲೂದಿ ದನಗಾಹಿಯೆನಿಸಿದರೆ, ಇನ್ನೊಬ್ಬ ಬಡಗಿಯ ಕೆಲಸವನ್ನು ಅವಲಂಬಿಸಿದವನು. ಒಬ್ಬ ರಾಧೆಯ ಪ್ರೇಮಪಾಶದಲ್ಲಿ ಬಂಧಿತನಾದರೆ, ಇನ್ನೊಬ್ಬ ಮಗ್ದಲದ ಮರಿಯಳ ಅನುರಾಗಕ್ಕೆ ಪಾತ್ರನಾಗುತ್ತಾನೆ. ಒಬ್ಬನು ಕೌರವನಿಂದ ಬಂಧಿತನಾದರೆ, ಇನ್ನೊಬ್ಬನು ತನ್ನವರ ಮೂಲಕವೇ ತಲೆಗೆ ಮುಳ್ಳಿನ ಕಿರೀಟವನ್ನು ತೊಡಬೇಕಾಗುತ್ತದೆ. ಈ ತೆರನಾದ ಸಾದೃಶ್ಯ ಪರಂಪರೆಯನ್ನು ಪಟ್ಟಿ ಮಾಡಿ, ಕಡೆಗೆ ಪೈ ಅವರು "ಯದುನಾಥನೆ ಯೂದನಾಥನಲ್ಲವೇ?" ಎಂದು ವಿಸ್ಮಯಚಕಿತರಾಗುವರು. ಕಾಲ, ದೇಶಗಳು ಬೇರೆ ಬೇರೆಯಾದರೂ ಅವರಿಗೆ ಆ ಈರ್ವರನ್ನು ಒಂದೇ ದೈವ ಶಕ್ತಿಯ ಎರಡು ಅವತಾರಗಳೆಂದು ಎಣಿಸಲು ಮನಸ್ಸು ಹಿಂತೆಗೆಯುವುದಿಲ್ಲ. ಆ ಬಗ್ಗೆ ಆಕ್ಷೇಪವೆತ್ತಿದವರಿಗೆ "ದಿನವೆರಡರ ಭಾಸ್ಕರನೆರಡಹನೆ?" ಎಂಬ ಪ್ರಶ್ನೆಯೇ ಅವರಿಗೆ ಸದುತ್ತರ.

ಕವಿಗಳ ಈ ಗಾಢವಾದ ದೈವಭಕ್ತಿಯೇ ಅವರ ಪತ್ನೀವಿಯೋಗದ ಬಾಷ್ಪಾಂಜಲಿಯನ್ನು, ಭಗವಂತನಿಗೆ ಶ್ರದ್ಧಾಂಜಲಿಯಾಗಿ ಸಮರ್ಪಿಸಲು ಸಮರ್ಥವಾಯಿತು. ಆಕೆಯ ನೆನಪಿಗಾಗಿ ಅವರು ಹಚ್ಚಿಟ್ಟಿರುವ 'ನಂದಾದೀಪ'ದ ಕವನಗಳು ಕನ್ನಡ ಕಾವ್ಯ ಪ್ರಪಂಚಕ್ಕೆ ಒಂದು ಅಮೂಲ್ಯವೂ ಅಪೂರ್ವವೂ ಆದ ಕೊಡುಗೆ. ಕವನ ಸಂಕಲನದಲ್ಲಿರುವ ಏಕಸೂತ್ರತೆಯನ್ನು, ಎಂದರೆ ಕವಿಯ ವಿರಹೋದ್ವೇಗ ಮತ್ತು ಅಚಲ ದೈವಶ್ರದ್ಧೆಗಳ ಎಳೆಗಳನ್ನು ಗುರುತಿಸುವ ಕೆಲಸ ತುಸು ಪ್ರಯಾಸವೆನ್ನಿಸಿದರೂ, ಪ್ರಯತ್ನಿಸಿದ್ದೇ ಆದರೆ ಫಲಕಾರಿಯಾಗದೆ ಇರದು. ಈ ಕೆಲಸದಲ್ಲಿ ಯಶಸ್ವಿಯಾಗಿರುವ ವಿ.ಎಂ. ಇನಾಂದಾರರು ತಮ್ಮ ಇಂಗ್ಲೀಷ್ ಪುಸ್ತಕದಲ್ಲಿ ಈ ಸಂಕಲನದ ಮೌಲ್ಯಗಳನ್ನು ನಿರ್ಣಹಿಸುವಲ್ಲಿ "ಈ ಕವಿತೆಗಳನ್ನು ಆಗಿಂದಾಗ್ಗೆ ಬರೆದಿದ್ದರೂ ಅವಿಚ್ಛಿನ್ನವಾಗಿ ಮುಂದುವರಿಯುವ ಭಾವನೆಯಿಂದಲೂ, ವಾಸ್ತವಿಕವಾಗಿ ಆ ಚಿಂತನೆ ಏಕಾಗ್ರವಾದ ದೈವಿಕಧ್ಯೇಯ

ಮತ್ತು ಆಕಾಂಕ್ಷೆಗಳ ಸುತ್ತಲೂ ಬಳಸಿ ಬೆಳಗಾಗುವುದರಿಂದಲೂ ಇವುಗಳು ಅನ್ಯೋನ್ಯವಾಗಿ ಹೊಂದಿಕೊಂಡಿವೆ" ಎಂದು ನೀಡಿರುವ ಅಭಿಪ್ರಾಯ ಸಮರ್ಪಕವೆನ್ನಿಸುತ್ತದೆ.

ಗೋವಿಂದ ಪೈ ಅವರು ವಿಭೂತಿ ಮಹತ್ವವನ್ನು ಕಂಡಲ್ಲಿ ಕೈಮುಗಿದು ತಲೆಬಾಗುವ ತಲೆಮಾರಿನವರು. ಈ ಕ್ಷೇತ್ರದಲ್ಲಿ ಅವರಿಗೆ ಕಾಲ ದೇಶಗಳ ಅಂತರವಾಗಲಿ, ಜಾತಿ, ಮತ, ಪಂಥಗಳ ತಾರತಮ್ಯವಾಗಲಿ ಇಲ್ಲ. ಅವರ ಈ ಪೂಜ್ಯ ಭಾವನೆ ಯೇಸುವಿನ ಕಡೆಯ ದಿನವನ್ನು ಕುರಿತ 'ಗೊಲ್ಗೊಥಾ'ದಲ್ಲಿ ವಿಶ್ವರೂಪವನ್ನೇ ತಾಳಿರುವುದನ್ನು ಕಾಣಬಹುದು.

'ಗೊಲ್ಗೊಥಾ' ಕೃತಿ ಧಾರ್ಮಿಕ ಪುರುಷನನ್ನು ಕುರಿತವಾದುದರಿಂದ, ವಿಷಯವನ್ನು ಪ್ರತಿಪಾದಿಸುವಲ್ಲಿ ಕವಿಯ ಹೊಣೆ ಬಹಳ ದೊಡ್ಡದಾದುದು. ಅವರು ಕೈಗೊಂಡಿರುವ ಕೆಲಸವಾದರೋ ಅದು ಧರ್ಮದ ಪ್ರಚಾರವಲ್ಲ ಮಹಾಪುರುಷನ ಮರಣದ ಮಹಾತ್ಮ್ಯೆ ಮಾತ್ರ!

ಗೋವಿಂದ ಪೈ ಅವರು ಮೊದಲು 'ಗೊಲ್ಗೊಥಾ'ವನ್ನು ಬರೆದರು ಈ ದೀರ್ಘ ಕವನ ಮೊದಲು ಬಿಡಿಬಿಡಿಯಾಗಿಯೂ ಅನಂತರ ಇಡಿಯಾಗಿಯೂ ಪ್ರಕಟವಾಯಿತು. ಈ ಕೃತಿ ಅಚ್ಚಾದ ಕೂಡಲೆ ಗೋವಿಂದ ಪೈ ಅವರ ಹೆಸರು ಮತ್ತು ಕಾವ್ಯಪ್ರತಿಭೆ ಬಹುಜನರಿಗೆ ಪರಿಚಯವಾಯಿತು. ಈ ಕವನದುದ್ದಕ್ಕೂ ತೋರಿಬರುವ ಪೈ ಅವರ ಕಾವ್ಯಪ್ರತಿಭೆ ಅಸದೃಶವಾದದ್ದು. ಯೇಸುವಿನ ಮೇಲಿನ ಅವರ ಅಂತಃಕರಣವೆಲ್ಲ ತನಗೆ ತಾನೇ ರೂಪುವೆತ್ತು ಕಡೆದು ನಿಲ್ಲಿಸಿದ ಜೀವಂತ ಕೃತಿಯೆನ್ನಿಸಿ ಕನ್ನಡದಲ್ಲಿ ಅಮರವಾಗಿದೆ.

ಗೋವಿಂದ ಪೈ ಅವರ ಈ ಕಾವ್ಯ ಸಮೀಕ್ಷೆ ಕೇವಲ ಒಂದು ಅಂತರಿಕ್ಷ ವೀಕ್ಷಣೆ (ಏರಿಯಲ್ ವ್ಯೂ)ಯೆನ್ನಿಸಿದರೂ ಅವರ ಕಾವ್ಯ ನಿರ್ಮಿತಿಯ ಒಂದು ಸ್ಥೂಲ ಪರಿಚಯವನ್ನಾದರೂ ಮಾಡಿಕೊಡಬಹುದೆಂದು ಎಣಿಸಿರುತ್ತೇನೆ ಅವರ ಕೃತಿಗಳಲ್ಲಿ ವ್ಯಕ್ತವಾಗುವ ಪ್ರಮುಖ ಪ್ರೇರಣೆಗಳು, ಅಪೂರ್ವ ಶಬ್ದಪ್ರಯೋಗಗಳು, ಛಂದೋವೈವಿಧ್ಯಗಳು ಶೈಲಿಯ ವಜ್ರಬಂಧ, ಪ್ರಯೋಗಶೀಲತೆ, ಕಾವ್ಯಾನುಸಂಧಾನ, ಪ್ರಾಚೀನ ಕವಿಗಳ ಪ್ರಭಾವ ಮೊದಲಾದುವುಗಳನ್ನೂ ಗಮನಿಸಿದರೆ, ಅವರನ್ನು ಆಧುನಿಕ ಕನ್ನಡ ಕಾವ್ಯದ ಪಂಡಿತ ಕವಿಗಳೆಂದು ಪರಿಗಣಿಸಬಹುದು.

ಅವರ ಸಾಹಿತ್ಯ ಸೇವೆಯನ್ನು ಗಮನಿಸಿ ೧೯೪೯ ರಲ್ಲಿ ಅಂದಿನ ಮದರಾಸು ಸರ್ಕಾರ ಆಗ್ಗೆ ದಕ್ಷಿಣ ಕನ್ನಡ ಜಿಲ್ಲೆ ಮದರಾಸಿಗೆ ಸೇರಿದ್ದರಿಂದ ಅವರನ್ನು "ರಾಷ್ಟ್ರಕವಿ" ಎಂಬ ಪ್ರಶಸ್ತಿಯನ್ನು ಕೊಟ್ಟು ಗೌರವಿಸಿದರು. ಅನಂತರ ೧೯೫೦ರಲ್ಲಿ ಬೊಂಬಾಯಿಯಲ್ಲಿ ನಡೆದ ಕನ್ನಡ ಸಾಹಿತ್ಯ ಸಮ್ಮೇಳನಕ್ಕೆ ಶ್ರೀ ಗೋವಿಂದ ಪೈ ಅವರನ್ನು ಅಧ್ಯಕ್ಷರನ್ನಾಗಿ ಆರಿಸಿ ಕನ್ನಡದ ಸಾರಸ್ವತ ಲೋಕ

ಅವರನ್ನು ಗೌರವಿಸಿತು. ಪೈಗಳು ಯಾವ ಪ್ರಶಸ್ತಿ ಪದವಿಗಳಿಂದಲೂ ಹಿಗ್ಗಲಿಲ್ಲ. ಸಾರ್ವಜನಿಕ ಸಮಾರಂಭಗಳಿಗೆ ಬರುವಂತೆ ಅವರನ್ನು ಒಪ್ಪಿಸುವುದೇ ಒಂದು ಮಹಾ ಪ್ರಯಾಸದ ಕಾರ್ಯವಾಗಿತ್ತು. ತಮಗೆ ಚೆನ್ನಾಗಿ ಪ್ರವೇಶವಿದ್ದ ಕನ್ನಡ, ಮರಾಠಿ, ಗುಜರಾತೀ, ಸಂಸ್ಕೃತ, ಪ್ರಾಕೃತ, ಗ್ರೀಕ್ ಇತ್ಯಾದಿ ಅನೇಕ ಭಾಷೆಗಳಲ್ಲಿ ಸಾಹಿತ್ಯ, ಸಂಶೋಧನ ಲೇಖನಗಳು, ತತ್ವ– ಇವುಗಳ ಅಧ್ಯಯನ ಮಾಡುತ್ತ, ಮನೆಯೇ ಮಂದಿರವಾಗಿ, ಬರುವ ಅತಿಥಿಗಳೇ ದೇವತೆಗಳಾಗಿ, ಹಲವು ಹತ್ತು ಮೂಡುಗಳ ಸಮುದ್ರ ನಿತ್ಯ ಮಿತ್ರನಾಗಿ, ಬಂಧುಗಳ, ಹೆರರ ಮಕ್ಕಳ ಅಕ್ಕರೆಯ ಆವರಣದಲ್ಲಿ ಅವರು ಕಾಲ ಕಳೆದುಬಿಟ್ಟರು.

ಅವರ ಆರೋಗ್ಯ ಇಳಿಮುಖವಾಗುತ್ತಾ ಹೋಯಿತು. ಕಾಸರಗೋಡು ಅದರಲ್ಲೂ ಮಂಜೇಶ್ವರ ಕೇರಳಕ್ಕೆ ಸೇರಿದ ಕೊರಗು, ಕನ್ನಡನಾಡಿನ ಭಾಗವಾಗದೇ ಹೋದ ಕೊರಗೇ ಅವರನ್ನು ಕುಟ್ಟೇ ಹುಳದಂತೆ ಕೊರೆಯಿತು. ೬.೯.೬೩ರ ಶುಕ್ರವಾರ ಪೈ ಅವರು ತಮ್ಮ ೮೧ನೆಯ ವಯಸ್ಸಿನಲ್ಲಿ ನಿಧನರಾದರು. ಕನ್ನಡದ ಹಿತಚಿಂತನೆಯಲ್ಲೇ ತಮ್ಮ ಪರಮ ಪರಿಶುದ್ಧವಾದ ಬದುಕನ್ನು ಕಳೆದ ಮಹಾನುಭಾವರು ಅವರು.

# ಸಂದರ್ಭ ಸೂಚಿ:


೧. 'ಕವಿ ಗೋವಿಂದ ಪೈ' (೧೯೪೯) ಜಿ.ಪಿ. ರಾಜರತ್ನಂ ಜೀವನ ಕಾರ್ಯಾಲಯ, ಬಸವನಗುಡಿ ಬೆಂಗಳೂರು–೫೬೦೦೧೯

೨. 'ದೀವಿಗೆ' (ಲೇಕನ ಸಂಗ್ರಹ) ಭಾಗ ಒಂದು (೧೯೬೪) ಗೋವಿಂದ ಪೈ ಸ್ಮಾರಕ ನಿಧಿ, ಭಂಡಾರ್ಕರ್ಸ್ ಕಾಲೇಜ್, ಕುಂದಾಪುರ.

೩. 'ಗೋವಿಂದ ಪೈ' (೧೯೮೩) (ಲೇಖನ ಸಂಗ್ರಹ) ಕನ್ನಡ ಅಧ್ಯಯನ ಸಂಸ್ಥೆ ಮೈಸೂರು ವಿಶ್ವವಿದ್ಯಾನಿಲಯ ಮೈಸೂರು – ೬.

೪. 'ಗೋವಿಂದ ಪೈ; ಶತಮಾನ ಸ್ಮರಣೆ (೧೯೮೪) (ಲೇಖನ ಸಂಗ್ರಹ) ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು – ೫೬೦೦೦೨.

ಅಧ್ಯಾಯ ೩

# ಬೈಬಲ್‌ನ ಸ್ವರೂಪ ಮತ್ತು ಆಶಯ

೩.೧ ಪ್ರಸ್ತಾವನೆ

೩.೨ ಬೈಬಲ್‌ನ ಸ್ವರೂಪ

೩.೩ ಬೈಬಲ್‌ನ ರಚಕರು

೩.೪ ಬೈಬಲ್ ಪ್ರಸ್ರರಣೆಗೊಂಡ ಭಾಷೆಗಳು

೩.೪.೧ ಹೀಬ್ರೂ ಭಾಷೆ

೩.೪.೨ ಅರಾಮಾಯಿಕ್ ಭಾಷೆ

೩.೪.೩ ಗ್ರೀಕ್ ಭಾಷೆ

೩.೪.೪ ಲ್ಯಾಟಿನ್ ಭಾಷೆ

೩.೫ ಮೌಖಿಕ ಸಂಸ್ಕೃತಿ ಮತ್ತು ಲಿಪಿ ಸಂಸ್ಕೃತಿ

೩.೬ ಜಂಬುಕಾಗದ-ಚರ್ಮಕಾಗದ

೩.೭ ಬೈಬಲಿನ ಅರ್ಥಕಲ್ಪನೆ ಮತ್ತು ಆಶಯ

೩.೮ ಅನನ್ಯ ಅನುವಾದಕ ಜೆರೊಮ್

೩.೯ ರಿನೇಸಾನ್ಸ್ ಕಾಲ

೩.೧೦ ನವೋದಯ ಕಾಲ

# ೩. ಬೈಬಲಿನ ಸ್ವರೂಪ ಮತ್ತು ಆಶಯ

## ೩.೧ ಪ್ರಸ್ತಾವನೆ:

ಬೈಬಲ್ ಕ್ರೈಸ್ತರ ಧರ್ಮಗ್ರಂಥ, ಯೆಹೂದ್ಯರ ಧರ್ಮಗ್ರಂಥವಾದ 'ತೋರಾ, ನೆಬೀಯೀಮ್, ಕೆಟೂಬೀಮ್' ಎಂದರೆ ಧರ್ಮಶಾಸ್ತ್ರ, ಪ್ರವಾದಿಗಳು ಮತ್ತು ಬರಹಗಳು ಅದರ ಪ್ರಥಮ ಭಾಗವನ್ನು 'ಹಳೆ ಒಡಂಬಡಿಕೆ' ಎಂದು ಕರೆಯಲಾಗುತ್ತದೆ. ಎಂದರೆ ಹಳೆ ಒಡಂಬಡಿಕೆಯು ಯೆಹೂದ್ಯರ ಹಿನ್ನೆಲೆಯಿಂದ ಹುಟ್ಟಿಕೊಂಡ ಸಾಹಿತ್ಯಕೃತಿ. ಎರಡನೇ ಭಾಗ 'ಹೊಸ ಒಡಂಬಡಿಕೆ' ಯೇಸುವಿನ ಕಾಲದ ನಂತರ ರಚಿತವಾದ ಗ್ರಂಥಗಳನ್ನು ಒಳಗೊಂಡಿದೆ. ಈ ಎರಡು ಭಾಗಗಳು ಬೈಬಲಿನ ಅವಿಭಾಜ್ಯವಾದ ಕೃತಿಗಳು.

"ಆದಿಯಲ್ಲಿ ದೇವರು ಆಕಾಶವನ್ನು ಭೂಮಿಯನ್ನು ಉಂಟುಮಾಡಿದನು. ಭೂಮಿಯು ಕ್ರಮವಿಲ್ಲದೆಯೂ ಬರಿದಾಗಿಯೂ ಇತ್ತು; ಆದಿ ಸಾಗರದ ಮೇಲೆ ಕತ್ತಲಿತ್ತು; ದೇವರಾತ್ಮವೂ ಜಲ ಸಮೂಹಗಳ ಮೇಲೆ ಚಲಿಸುತ್ತಿತ್ತು.

ಆಗ ದೇವರು – ಬೆಳಕಾಗಲಿ ಅನ್ನಲು ಬೆಳಕಾಯಿತು. ದೇವರು ಆ ಬೆಳಕನ್ನು ಒಳ್ಳೆದೆಂದು ನೋಡಿದನು. ದೇವರು ಬೆಳಕನ್ನೂ ಕತ್ತಲೆಯನ್ನೂ ಬೇರೆಬೇರೆ ಮಾಡಿ ಬೆಳಕಿಗೆ ಹಗಲೆಂದೂ, ಕತ್ತಲೆಗೆ ಇರುಳೆಂದೂ ಹೆಸರಿಟ್ಟನು. ಹೀಗೆ ಸಾಯಂಕಾಲವು, ಪ್ರಾತಃಕಾಲವೂ ಆಗಿ ಮೊದಲನೆಯ ದಿನವಾಯಿತು".

ಭಾಷೆ ಪ್ರಾರಂಭವಾಗಿದ್ದು ಮೌಖಿಕ ಪ್ರರಂಪರೆಯ ಮೂಲಕವೇ. "ಆದಿ" (ಜೆನೆಸಿಸ್) ಅಂದರೆ "ಮೂಲ" ಎಂದರ್ಥ. ಭೂಮ್ಯಾಕಾಶಗಳ ಹಾಗೂ ಸಮಸ್ತ ಮನುಕುಲದ ಸೃಷ್ಟಿ, ಹಗಲು ರಾತ್ರಿ–ಹೀಗೆ ದೇವರು ಲೋಕವನ್ನು ಸೃಷ್ಟಿಸಿದ.

ಎಲ್ಲಾ ಭಾಷೆಗಳೂ ಮೊದಲಿಗೆ ಮೌಖಿಕ ಪರಂಪರೆಯಲ್ಲೇ ಇದ್ದಿತು. ವಾಕ್ಯ, ಮಾತು, ವಚನ, ಪದ ಮುಂತಾದ ಸಂವಹನ ಕ್ರಿಯೆಗಳೆಲ್ಲಾ ಮಾತಿನ ಮೂಲಕವೇ.

ಕತೆಗಳು, ಅನುಭವಗಳು, ಕಾವ್ಯ, ಹಾಡುಗಳು, ದೇವರು, ಧರ್ಮಚಿಂತನೆ, ಸ್ವರ್ಗನರಕ– ಇವುಗಳೆಲ್ಲಾ ಒಬ್ಬರಿಂದ ಮತ್ತೊಬ್ಬರಿಗೆ ಮೌಖಿಕವಾಗಿ ಜನಾಂಗದಿಂದ ಜನಾಂಗಕ್ಕೆ ಹರಿದಿವೆ. ಇಡೀ ಮಾನವ ಜನಾಂಗದ ಜೀವಾಳವೇ ಮೌಖಿಕ ಪರಂಪರೆಯ ಮೂಲಕ ಹರಿದು ಬಂದಿದೆಯೆಂದರೆ ಆಶ್ಚರ್ಯ ಪಡಬೇಕಾಗಿಲ್ಲ.

ಜಗತ್ತಿನಾದ್ಯಂತ ಆಗಿನ ಜನರು ತಮ್ಮ ಧರ್ಮ, ನಂಬಿಕೆ, ಶಾಸ್ತ್ರ, ಸಂಸ್ಕೃತಿ, ಜ್ಞಾನಗಳೆಲ್ಲವನ್ನು ಒಬ್ಬರಿಂದ ಮತ್ತೊಬ್ಬರಿಗೆ ತಲುಪಿಸಿದ್ದು ಮೌಖಿಕವಾಗಿಯೇ. ಮೌಖಿಕ ಪರಂಪರೆ ಅಷ್ಟೊಂದು ಸುಲಭವೂ ಅಲ್ಲ, ಲಘುವಾದ ಸಂವಹನ ಕ್ರಿಯೆಯೂ ಅಲ್ಲ. ಬಾಯಿ ಮಾತಿನ ವಿಚಿತ್ರ ಲಕ್ಷಣವೆಂದರೆ ಆಡಿದ ಮಾತನ್ನು ಮತ್ತು ವಾಪಸ್ಸು ಪಡೆಯಲು ಆಗುವುದಿಲ್ಲ.

**೩.೨ ಬೈಬಲಿನ ಸ್ವರೂಪ:**

ಬೈಬಲ್ ಒಂದು ಮಹೋನ್ನತ ಕೃತಿ ಇಂದೊಂದು ಧಾರ್ಮಿಕ, ಆಧ್ಯಾತ್ಮಿಕ, ಪ್ರವಾದನೆ, ಸಾಹಿತ್ಯಿಕ, ಇತಿಹಾಸ, ಜೀವನ ಚರಿತ್ರೆ, ಮಾರ್ಗದರ್ಶಿ, ಪ್ರಬೋಧಕ, ಶ್ರೇಷ್ಠ ವ್ಯಕ್ತಿಗಳ ಸ್ಥಳಗಳ ಹಾಗೂ ಕಾಲಗಳ ವಿವೇಚನೆಯನ್ನು ಒಳಗೊಂಡ ಕೃತಿಯಾಗಿದೆ. ಇದು ಮೂಲದಲ್ಲಿ ಪ್ರಮುಖವಾಗಿ ಮೂರು ಭಾಷೆಗಳಲ್ಲಿ ಹೊರಮೂಡಿತ್ತು. ಮನುಷ್ಯ ಮನುಷ್ಯರ ನಡುವೆ, ಮನುಷ್ಯ ದೇವರ ನಡುವೆ ಇಟ್ಟುಕೊಂಡ, ಇಟ್ಟುಕೊಳ್ಳಬೇಕಾದ ಸಂಬಂಧ, ಒಡಂಬಡಿಕೆಗಳ ಸೂಕ್ಷ್ಮ ಸ್ವರಗಳಿಂದ ಹೊರಹೊಮ್ಮಿದ ಕೃತಿ, 'ದೇವರ ವಾಕ್ಯ', 'ದೇವರು ಮಾತಾಡಿದನು', 'ದೇವರು ಮಾತನಾಡುತ್ತಾನೆ'ಎಂಬುದು ಇದರ ಮೂಲ ಸೆಲೆ.

ದೇವರನ್ನು ಅರಿಯುವ ಪ್ರಕ್ರಿಯೆಯಲ್ಲಿ ತನ್ನನ್ನು ತಾನು ಗಾಢವಾಗಿ ಅರಿಯುವ ಒಂದು ನಿರಂತರ ಆಂತರಿಕ ಸಂಘರ್ಷ. ಬೈಬಲಿನ ಆರಂಭದ 'ಆದಿಕಾಂಡ' (Genesis) ದಿಂದ ಕೊನೆಯ ಭಾಗ 'ಪ್ರಕಟಣೆ' (Revelation) ವರೆಗೂ ಇರುವ ಬದುಕಿನ ದ್ರವ್ಯಗಳು ಈ ಅನುಭವವನ್ನು ಒಂದಲ್ಲ ಒಂದು ರೀತಿಯಲ್ಲಿ ಅನಾವರಣಗೊಳಿಸುತ್ತದೆ.

ಹೀಬ್ರೂ, ಗ್ರೀಕ್, ಅರಾಮಿಕ್ ಭಾಷಾ ಮೂಲದಿಂದ ಬಂದ ಬೈಬಲ್ ಇಂದು ನೂರಾರು ಭಾಷೆಗಳಿಗೆ ಅನುವಾದಗೊಂಡು ಜಗತ್ತಿನಲ್ಲೆಡೆಯಿದೆ. ಅತಿ ಹೆಚ್ಚು ಮುದ್ರಣ, ಭಾಷಾಂತರ, ಪಾಠಾಂತರ ಹಾಗೂ ಪರಿಷ್ಕರಣೆಗಳನ್ನು ಕಂಡಿರುವ ಏಕೈಕ ಧರ್ಮಗ್ರಂಥ. ಪ್ರತಿ ಭಾಷಾಂತರ ಹಾಗೂ ಪರಿಷ್ಕರಣಗಳಲ್ಲಿ ಪಠ್ಯಗಳು ಬಹುಸ್ಪಷ್ಟವಾದ ಅರ್ಥಗಳನ್ನು ಹೊಮ್ಮಿಸುತ್ತಾ ಬಗೆಬಗೆಯ ಅಧ್ಯಯನಗಳಿಗೆ ಅನುವು ಮಾಡಿಕೊಡುತ್ತಾ ಬಂದಿದೆ.

ಬೈಬಲಿನ ಮೇಲೆ ಆಗಿರುವ ಜಾಗತಿಕ ಆಕ್ರಮಣಗಳು ಒಂದಲ್ಲ, ಎರಡಲ್ಲ. ಜಾಗತಿಕವಾಗಿ ನಡೆದಿರುವ ಧಾರ್ಮಿಕ ಹಾಗೂ ವೈಚಾರಿಕ ಆಕ್ರಮಣಗಳು ಈ ಗ್ರಂಥದ 'ಜೀವ'ಕ್ಕೆ ಏನೂ ಮಾಡಲೂ ಆಗಲಿಲ್ಲ. ಜಗತ್ತಿನ ಅನೇಕ ಯುದ್ಧಗಳು, ಒತ್ತಡಗಳು, ಸಂಘರ್ಷಗಳು, ಹಿಂಸೆ,

ಕ್ರೌರ್ಯ ಇವುಗಳೆಲ್ಲವನ್ನು ಮೀರಿ ಇದು ಶಾಂತಿ ಹಾಗೂ ಪ್ರೀತಿಯ ಸಂದೇಶಗಳನ್ನು ಸಾರುತ್ತಾ ಬಂದಿದೆ. ಈ ಕೃತಿ ಒಬ್ಬ ಲೇಖಕನದಲ್ಲ, ಅನೇಕರ ಕೃತಿಗಳು ಒಂದೇ ಗ್ರಂಥದೊಳಗೆ ಹಾಸು ಹೊಕ್ಕಾಗಿವೆ.

ಬೈಬಲ್ ಕೇವಲ ಒಂದು ಪುಸ್ತಕವಲ್ಲ, ಪುಸ್ತಕಗಳ ಪುಸ್ತಕ, ಹಳೇ ಒಡಂಬಡಿಕೆಯಲ್ಲಿ ಹೇಳಿರುವ ನೂರಾರು ಪ್ರವಾದನೆಗಳು ಹೊಸ ಒಡಂಬಡಿಕೆ ಕಾಲದಲ್ಲಿ ಸಾಕಾರಗೊಂಡಿರುವುದನ್ನು ಬಹು ಸ್ಪಷ್ಟವಾಗಿ ಕಾಣಬಹುದು.

ಬೈಬಲಿನ ಪ್ರಧಾನವಾಗಿ ಎರಡು ಭಾಗಗಳು– ಹಳೆ ಒಡಂಬಡಿಕೆ (old testament) ಹಾಗೂ ಹೊಸ ಒಡಂಬಡಿಕೆ (new testament) ಹಳೆ ಒಡಂಬಡಿಕೆಯಲ್ಲಿ ೨೯ ಪುಸ್ತಕಗಳು ಹೊಸ ಒಡಂಬಡಿಕೆಯಲ್ಲಿ ೨೭ ಪುಸ್ತಕಗಳಿವೆ. ಒಟ್ಟು ೧೧೮೯ ಅಧ್ಯಾಯನಗಳನ್ನು ಹಾಗು ೩೧,೧೭೪ ವಚನಗಳನ್ನು ಹೊಂದಿದೆ. ಕ್ಯಾಥೋಲಿಕ್‌ರು ಒಪ್ಪಿಗೊಂಡಿರುವ ಬೈಬಲಿನಲ್ಲಿ ಅಲ್ಪಸ್ವಲ್ಪ ಬದಲಾವಣೆಗಳು ಇವೆ.

'ಒಡಂಬಡಿಕೆ'ಯೆಂದರೆ ಇಲ್ಲಿ ಪರಸ್ಪರ ಜನರು, ದೇವರು ಜನರೊಡನೆ, ಒಂದು ಪಂಗಡ ಮತ್ತೊಂದು ಪಂಗಡದೊಡನೆ ಮಾಡಿಕೊಳ್ಳುವ ಒಂದು ಒಪ್ಪಂದ. ಕನಿಷ್ಠ ಇಬ್ಬರಿಲ್ಲದೆ ಒಡಂಬಡಿಕೆ ಅಸಾಧ್ಯ. ಹಳೆ ಒಡಂಬಡಿಕೆಯಲ್ಲಿರುವ ಈ ಪದ ಮೋಶೆಯ ಕಾಲದಲ್ಲಿ ದೇವರು ಇಸ್ರಾಯೇಲ್ಯರೊಂದಿಗೆ ಮಾಡಿಕೊಂಡ ಒಪ್ಪಂದವನ್ನು ಸೂಚಿಸುತ್ತದೆ. ದೇವರು ನೋಹನೊಂದಿಗೆ ಅಬ್ರಹಾಮನೊಂದಿಗೆ ಒಡಂಬಡಿಕೆಯನ್ನು ಮಾಡಿಕೊಂಡನು. ದೇವರು ಇಸ್ರಾಯೇಲರೊಡನೆ ಮಾಡಿಕೊಂಡ ಒಡಂಬಡಿಕೆಯಂತೆ ಆ ಜನರು ನಡೆಯಲಿಲ್ಲ. ಆ ದೈವಿಕ ಒಡಂಬಡಿಕೆಗೆ ಬದ್ಧರಾಗಲು ಅವರಿಂದ ಆಗಲೇ ಇಲ್ಲ. ಕಾರಣ ಆ ಜನರಲ್ಲಿ ಆಂತರಿಕ ಶಕ್ತಿಯಿರಲಿಲ್ಲ. ಬದುಕಿನಲ್ಲಿ ಪದೆಪದೆ ಎಡವುತ್ತಿದ್ದರು. ಇಸ್ರಾಯೇಲರ ಈ ಬಲಹೀನ ಹಾಗೂ ನೀರಸ ಬದುಕನ್ನು ಕಂಡು ದೇವರು ಅವರಿಗೆ ಹೊಸ ಒಡಂಬಡಿಕೆಯ ವಾಗ್ದಾನ ಮಾಡಿದನು. ತಾನೆಂದೂ ತನ್ನ ಪ್ರಜೆಯನ್ನು ತಿರಸ್ಕರಿಸುವುದಿಲ್ಲವೆಂದು ಹೇಳಿ ಈ ಹೊಸ ಒಡಂಬಡಿಕೆಗೆ ಯಾವ ಬಾಹ್ಯ ವಿಧಿ ನಿಯಮಗಳ ಶರತ್ತುಗಳನ್ನು ಮಾಡದೆ ಕೇವಲ ಪ್ರೀತಿಯ ಅಸ್ತಿವಾರದ ಮೇಲೆ ಕಟ್ಟುವುದಾಗಿ ಹೇಳಿದನು. ಈ ಹೊಸ ಒಡಂಬಡಿಕೆಯ ಮೂಲಕ ಇಸ್ರಾಯೇಲರು ಹೊಸ ಪ್ರಜೆಗಳಾಗುವ, ಹೊಸ ಬದುಕಿನ ನಂಬಿಕೆ ನಿರೀಕ್ಷೆಯನ್ನು ಪಡೆದರು. ಹೊಸತನದ ಪ್ರತಿರೂಪವಾದ ಯೇಸುವು ತನ್ನ ಬದುಕು ಬೋಧನೆಯಲ್ಲಿ ಈ ಸತ್ಯವನ್ನು ಪ್ರಕಟಿಸಿದನು. ಯೇಸು ಹಾಗು ಅವನ ಹನ್ನೆರಡು

ಮಂದಿ ಶಿಷ್ಯರು ಹಳೆ ಒಡಂಬಡಿಕೆಯ ಮಾತುಗಳನ್ನು ದೇವರ ವಾಕ್ಯಗಳೆಂದು ಪರಿಗಣಿಸಿದರು. ಹಳೆ ಒಡಂಬಡಿಕೆಯಲ್ಲಿ ಯೇಸುವನ್ನು ಕುರಿತಾಗಿ ಬಂದ ಪ್ರವಾದನೆಗಳು ಯೇಸುವಿನಲ್ಲಿ ಸಾಕಾರಗೊಂಡವು. ಹಳೆ ಒಡಂಬಡಿಕೆಯ ಜನರು ವಿಶೇಷವಾದ ದೈವ ಪ್ರೇರಣೆಯನ್ನು ಹೊಂದಿದ್ದು ಅವರು ಹೊಸ ಒಡಂಬಡಿಕೆಗೆ ಸಿದ್ಧತೆಯನ್ನು ಮಾಡುವುದರ ಮೂಲಕ ಸಂಬಂಧವನ್ನು ಕಲ್ಪಿಸಿಕೊಟ್ಟರು. ಹೊಸಒಡಂಬಡಿಕೆಯ ಜನ ಈ ದೈವ ಪರಂಪರೆಯನ್ನು ಮುಂದಿನ ಪೀಳಿಗೆಗೆ ತಲುಪುವಂತೆ ಮಾಡಿದರು.

**೩.೩ ಬೈಬಲ್‌ನ ರಚಕರು:**

ಬೈಬಲನ್ನು ಬರೆದವರ ಬಗ್ಗೆ ಅನೇಕ ಪ್ರಶ್ನೆಗಳು ಅನೇಕರನ್ನು ಸಹಜವಾಗಿ ಕಾಡುತ್ತಿರುತ್ತದೆ. ಬೈಬಲಿನ ಅನೇಕ ಭಾಗಗಳಲ್ಲಿ ಆ ಗ್ರಂಥಕರ್ತನ ಹೆಸರಾಗಲಿ ಅವನ ಬಗ್ಗೆ ಮಾಹಿತಿಗಳಾಗಲಿ ದೊರೆಯುವುದಿಲ್ಲ. ಒಂದರ್ಥದಲ್ಲಿ ಬೈಬಲಿನ ಮೊದಲ ಪಂಚಗ್ರಂಥಗಳನ್ನು ಬರೆದಿರುವ ವ್ಯಕ್ತಿ ಅನಾಮಿಕನಾಗಿಯೇ ಉಳಿಯುತ್ತಾನೆ. ಆದರೆ ಶತಶತಮಾನಗಳಿಂದ ಹರಿದು ಬಂದಿರುವ ಸಾಂಪ್ರದಾಯಗಳು ಈ ಗ್ರಂಥವನ್ನು ಮೋಶೆ ಬರೆದನೆಂದು ಹೇಳುತ್ತವೆ. ಈ ಭಾಗದಲ್ಲಿ ಮೋಶೆಯ ಹೆಸರನ್ನು ಅನೇಕ ಸಲ ಪ್ರಸ್ತಾಪಿಸಿದರೂ ಈತನೆ ಇದರ ಗ್ರಂಥ ಕರ್ತನೆಂದು ಎಲ್ಲಿಯೂ ಹೇಳಲಿಲ್ಲ. ಪಂಚಗ್ರಂಥಗಳಲ್ಲಿ ಒಂದಾದ 'ಧರ್ಮೋಪದೇಶಕಾಂಡ'ದಲಿ ಮೋಶೆಯ ಸಾವನ್ನು ಪ್ರಸ್ತಾಪಿಸಲಾಗಿದೆಯಾದರೂ ಅಲ್ಲಿಯೂ ಸಹ ಯಾವ ಅಧಿಕೃತ ಮಾಹಿತಿಗಳು ದೊರೆಯದೆ ಲೇಖಕ ಅಗೋಚರನಾಗಿಯೇ ಉಳಿಯುತ್ತಾನೆ. ಆಧುನಿಕ ಬೈಬಲ್ ಸಂಶೋಧನಾ ಶಾಸ್ತ್ರವು ಹೇಳುವ ಹಾಗೆ ಈ ಭಾಗವು ಅನಾದಿಯಿಂದಲೂ ಜನಾಂಗದ ಜೀವಾಳವಾಗಿ ಹರಿದು ಬಂದಿರುವ ಪರಂಪರೆಯ ಕೊಡುಗೆ. ಅಲ್ಲದೆ ಆ ಪರಂಪರೆ, ಸಂಪ್ರದಾಯ, ಸಂಸ್ಕೃತಿಗಳ ಒಟ್ಟಾರೆ ಅನುಭವಗಳು ಇಲ್ಲಿ ಹರಳುಗಟ್ಟಿವೆ. ಈ ಪಂಚ ಗ್ರಂಥಗಳ ಹಿಂದೆ ಅನೇಕ ಕಾಣದ ಕೈಗಳು ಕೆಲಸ ಮಾಡಿವೆಯೆಂದು ತಜ್ಞರ ಅನಿಸಿಕೆ. ಇಂತಹ ವಿಸ್ಮಯಗಳಿಗೆ ಸರಿಯಾದ ಉತ್ತರಗಳು ಅಲಭ್ಯವಾದರೂ ಬೈಬಲ್ ಪ್ರಾಚ್ಯ ವಸ್ತು ಸಂಶೋಧನೆಗಳು ಇವುಗಳ ಮೇಲೆ ಹೊಸಹೊಸ ಬೆಳಕನ್ನು ಚೆಲ್ಲುತ್ತಲೇ ಇವೆ. ಬೈಬಲಿನ ಪ್ರಾಚ್ಯವಸ್ತು ಶಾಸ್ತ್ರದ ಅಧ್ಯಯನದ ಹೊಳವುಗಳು, ಪ್ರಾಚೀನ ಹಸ್ತಪ್ರತಿಗಳ ಆಧಾರಗಳು, ಸಾವಿರಾರು ಸಂಶೋಧನಾ ದಾಖಲಾತಿಗಳು ಲಭ್ಯವಿದ್ದರೂ ಸಹ ಈ ಗ್ರಂಥವನ್ನು ಕೇವಲ ದೈವ ಪ್ರೇರಣೆಯಿಂದಲೇ ಬರೆದಿದ್ದಾರೆಂದು ಕ್ರೈಸ್ತರ ಅಚಲ ನಂಬಿಕೆ. ಹಾಗಾಗಿಯೇ ಬೈಬಲಿನ ಮಾತುಗಳು ಕೇವಲ ಮಾತುಗಳಾಗಿರದೆ ಅಲ್ಲಿಯ ಮಾತುಗಳೆಲ್ಲವೂ

ದೇವರ ಮಾತುಗಳು, ದೇವರ ವಾಕ್ಯಗಳೆಂದು ಪರಿಗಣಿಸುತ್ತಾರೆ. ಪಂಚಗ್ರಂಥಗಳ ಹಿಂದೆ ಅನೇಕ ಕಾಣದ ಕೈಗಳು ಕೆಲಸ ಮಾಡಿವೆಯೆಂದು ತಜ್ಞರ ಅನಿಸಿಕೆ.

ಹಳೆ ಹಾಗೂ ಹೊಸ ಒಡಂಬಡಿಕೆಯ ಎಲ್ಲಾ ಗ್ರಂಥಕರ್ತರಿಗೆ ತಮಗಾದ ದೈವಪ್ರೇರಣೆಯನ್ನು ತಾವು ಕಂಡುಂಡ ಸತ್ಯಗಳನ್ನು ಬೇರೆಯವರಿಗೆ ತಿಳಿಸುವ ತವಕ, ತೀವ್ರತೆಗಳು ಬೈಬಲ್ ಅನುವಾದದ ಪ್ರಕ್ರಿಯೆಗೆ ಒಳಪಡುವಂತಾಯಿತು. ಪ್ರಾಚೀನ ಹಾಗೂ ಆಧುನಿಕ ಜಗತ್ತಿಗೆ ಬೈಬಲ್ ಗೊತ್ತಾಗಿದ್ದೇ ಭಾಷಾಂತರಗಳಿಂದ, ಬೇರೆಯವರಿಗೆ ತಿಳಿಸುವ ತವಕ, ತೀವ್ರತೆಗಳು ಇಲ್ಲದೆ ಹೋಗಿದ್ದರೆ ಬೈಬಲ್ ಇದ್ದಲ್ಲಿಯೇ ಇದ್ದು ಭಾಷಾಂತರಗಳ ಗೋಜಿಗೂ ಅಷ್ಟಾಗಿ ಹೋಗುತ್ತಿರಲಿಲ್ಲ. ಕ್ರಿ.ಪೂ. ಮೂರನೆ ಶತಮಾನದಲ್ಲಿ ಈಜಿಪ್ಟ್‌ನಲ್ಲಿದ್ದ, ಯೆಹೂದಿಗಳಿಗೆಲ್ಲಾ ಧರ್ಮಶಾಸ್ತ್ರವನ್ನು ಅಧ್ಯಯನ ಮಾಡುವ ತವಕವುಂಟಾಯಿತು. ಆದರೆ ಅವರಿಗೆ ಹೀಬ್ರೂ ಭಾಷೆ ಬರುತ್ತಿರಲಿಲ್ಲ. ಆಗ ಬಹು ಚಲವಣೆಯಲ್ಲಿದ್ದ ಶಕ್ತಿಯುತ ಭಾಷೆಯೆಂದರೆ ಗ್ರೀಕ್ ಭಾಷೆ.

ಆಗಲೇ ಅಲೆಗ್ಸಾಂಡರನ ಕಾಲದ ನಂತರ ಕ್ರಿ.ಪೂ ೪ ರಿಂದ ಕ್ರಿ.ಶ. ೧ನೇ ಶತಮಾನದವರೆಗೆ ಆಗಸ್ಟಸ್ ಕಾಲದವರೆಗಿನ ಗ್ರೀಕ್ ಲಕ್ಷಣಗಳು ವಿದೇಶಿ ಪ್ರಭಾವಗಳಿಂದ ಮಾರ್ಪಾಡು ಹೊಂದುತ್ತಿರುವಾಗ ಯೆಹೂದಿ ವಿದ್ವಾಂಸರು ಹೀಬ್ರೂ ಧರ್ಮಶಾಸ್ತ್ರಗಳನ್ನು ಭಾಷಾಂತರ ಮಾಡತೊಡಗಿದರು. ಹೀಬ್ರೂ ಭಾಷೆಯ ಧರ್ಮಶಾಸ್ತ್ರವು ಗ್ರೀಕ್ ಭಾಷೆಗೆ ಬಂದ ಕೂಡಲೆ ಭಾಷಾಂತರಗಳ ಪ್ರಕ್ರಿಯೆಗಳಿಗೆ ಸಿಕ್ಕ ಬಲ ಅಷ್ಟಿಷ್ಟಲ್ಲ. ಮೂಲ ಬರಹದಂತೆ ಭಾಷಾಂತರಗಳು ಸಹ ದೈವ ಪ್ರೇರಣೆ ಎಂಬ ನಂಬಿಕೆ ಬಲವಾಗಿಯೇ ಇದೆ.

ಬೈಬಲ್ ಮಾನವ ಜನಾಂಗದ ಚರಿತ್ರೆಯನ್ನು ಒಳಗೊಂಡಿದೆಯಾದರೂ ಇದು ಕೇವಲ ಇತಿಹಾಸದ ಕೃತಿಯಾಗಲಿ, ಸಂಶೋಧನಾ ಕೃತಿಯಾಗಲಿ ಅಲ್ಲ. ಇದರ ಬರಹಗಾರರು ಇತಿಹಾಸಗಾರರಾಗಲಿ, ಸಂಶೋಧಾನಾ ವಿದ್ವಾಂಸರಾಗಲಿ ಅಥವಾ ವಿಜ್ಞಾನಿಗಳಾಗಲಿ ಆಗಿರಲಿಲ್ಲ. ಅನೇಕರು ಕೇವಲ ಸಾಮಾನ್ಯ ವ್ಯಕ್ತಿಗಳು ದೇವರೇ ಕೃತಿಕಾರನೆಂಬ ಅಚಲ ನಂಬಿಕೆ ಅವರದು. ಅನೇಕ ವೇಳೆ ಇದು ಚರಿತ್ರೆಯಂತೆ ಕಂಡರೂ ವಿಶ್ವಾಸದ ನೆಲೆಯಲ್ಲಿಯೇ ರಚಿತವಾಗಿರುವುದರಿಂದ ಇಲ್ಲಿ ವಿಶ್ವಾಸ ದೈವಾನುಭವ ಪ್ರಧಾನವಾಗುವುದೇ ಹೊರತು ಕೇವಲ ಚರಿತ್ರೆಯಲ್ಲ. ಸಾಮಾನ್ಯವಾಗಿ ಸಾಹಿತ್ಯಿಕ ಗ್ರಂಥಗಳ ಮೌಲ್ಯ ಅವುಗಳ ಕೃತಿಕಾರನ ಪಾಂಡಿತ್ಯದ ಆಳ ಎತ್ತರ ಅಗಲದ ಆಧಾರದ ಮೇಲೆ ನಿಂತಿರುತ್ತದೆ. ಆದರೆ ಬೈಬಲಿನ ಸಂದರ್ಭದಲ್ಲಿ ಬರಹಗಾರನಿಗಿಂತಲೂ

ಪಠ್ಯವೇ ಮುಖ್ಯವಾಗುತ್ತದೆ. ಇದೊಂಡು ಅಪೂರ್ವ ಗ್ರಂಥವಾಗಿದ್ದು ಆವರಿಸಿಕೊಂಡಿರುವ ವಸ್ತು ವಿನ್ಯಾಸಗಳೂ ಸಹ ಸೀಮಾತೀತ. ಇದೇ ಒಂದು ಪುಸ್ತಕ ಭಂಡಾರ.

ಬೈಬಲ್ ಎಂದರೆ 'ಪುಸ್ತಕ' ಎಂದರ್ಥ. ಇದು ಪುಸ್ತಕಗಳ ಪುಸ್ತಕ. ಗ್ರೀಕ್ ಭಾಷೆಯ 'ಬಿಬ್ಲಿಯಾ" (Biblia) ಇದರ ಮೂಲಪದ ಬೈಬಲ್ ಹಲವಾರು ಪುಸ್ತಕಗಳ ಒಂದು ಸಂಕಲನವಾಗಿರುವುದರಿಂದ ಅದಕ್ಕಿ 'ಬಿಬ್ಲಿಯಾ' ಎಂದು ಕರೆದರು. ಇದನ್ನೇ ಲ್ಯಾಟಿನ್ ಭಾಷೆಯಲ್ಲಿ 'ಬಿಬ್ಲಿಯಾ' ಎಂದು ಹಾಗೂ ಇಂಗ್ಲೀಷಿನಲ್ಲಿ 'ಬೈಬಲ್' ಎಂದು ಕರೆಯಲಾಯಿತು.

ಹೊಸ ಒಡಂಬಡಿಕೆ ಕ್ರಿಸ್ತನಿಂದ ಪ್ರಾರಂಭವಾಯಿತು. ಆತನು ತನ್ನ ಶಿಷ್ಯರಿಗೆ ಶುಭ ಸಂದೇಶವನ್ನು ನೀಡಿ ಅವರು ಅದನ್ನು ಬಹಳ ಸುಲಭವಾಗಿ ಮನನ ಮಾಡಲು ಹಾಗೂ ಅವರ ಬದುಕಿನಲ್ಲಿ ಹಾಸುಹೊಕ್ಕಾಗುವಂತೆ ಬಹು ಸರಳ ಹಾಗೂ ಅರ್ಥಪೂರ್ಣವಾಗಿ ಬೋಧಿಸಿದನು. ಬೋಧನೆಗಳನ್ನು ಜೀವಂತವಾಗಿಡಲು ಅನೇಕ ಸುಂದರ, ಅರ್ಥಪೂರ್ಣ ಸಾಮತಿಗಳನ್ನು ಹೇಳಿದನು ಈ ಭೋಧನೆಗಳಲ್ಲಿ ಹೃದಯ ಹಾಗೂ ಬುದ್ಧಿ–ಇವೆರಡು ಒಟ್ಟೊಟ್ಟಿಗೆ ಕೆಲಸ ಮಾಡಿವೆ. "ಸಮಾನ ದೃಷ್ಟಿಯ ಸುವಾರ್ತೆಗಳಾದ ಮತ್ತಾಯ, ಮಾರ್ಕ್ ಹಾಗೂ ಲೂಕನ ಸುವಾರ್ತೆಗಳಲ್ಲಿ ಸುಮಾರು ನಲವತ್ತು ಸಾಮತಿಗಳಿದ್ದು–ಇವುಗಳೆಲ್ಲವೂ ಆ ಕಾಲದ ದಿನನಿತ್ಯದ ಬದುಕಿನ ವಸ್ತುಗಳಿಂದ ಆಯ್ದುಕೊಂಡವುಗಳು. ದೇವರ ರಾಜ್ಯದ ವಿಸ್ಮಯವನ್ನು ತಿಳಿಸಲು ಈ ಸಾಮತಿಗಳನ್ನು ನಿಮಗೆ ಹೇಳುತ್ತಿದ್ದೇನೆ ಎಂದು ಕ್ರಿಸ್ತನು ತನ್ನ ಶಿಷ್ಯರಿಗೆ ಹೇಳಿರುವುದು ಸಾಮತಿಗಳ ಮಹತ್ವವನ್ನು ತಿಳಿಸುತ್ತದೆ. ಪ್ರಾಚೀನ ಕಾಲದ ಋಷಿ ಸಂಕುಲ ತಮ್ಮ ಬೋಧನೆಗಳಲ್ಲಿ ಸಾಮತಿಗಳನ್ನು ಉಪಯೋಗಿಸುವುದು ಸಾಮಾನ್ಯವಾದರೂ ಕ್ರಿಸ್ತನು ಅವುಗಳನ್ನು ಬಹು ಶಕ್ತಿಯುತವಾಗಿ ಉಪಯೋಗಿಸಿದನು.

ಮನುಷ್ಯನ ಬದುಕಿನಲ್ಲಿ ಭಾಷೆ ವಿಕಸನಗೊಂಡಿರುವುದನ್ನು ಅಧ್ಯಯನ ಮಾಡುವುದೇ ಒಂದು ಅನುಭವ. ಆತ ಮೊದಲು ರೇಖಾ ಚಿತ್ರಗಳ ಮೂಲಕ ಆಲೊಚನೆಗಳನ್ನು ತಿಳಿಯಲು ಪ್ರಯತ್ನಿಸಿದ, ಹಳೆಯ ಸುಮೇರಿಯಾ ಹಾಗು ಚೀನಾದ ದಾಖಲೆಗಳ ಪ್ರಕಾರ ಈ ರೇಖಾ ಚಿತ್ರಗಳು ಆಕಾರದಲ್ಲಿ ದೊಡ್ಡದಾದವು, ಎಂದು ಅಂಕಿಗಳನ್ನು ಬಳಸಲಾರಂಬಿಸಿದ ಕ್ರಮೇಣ ಉಚ್ಚರಾಂಶ (Syllable ) ಗಳನ್ನು ಉಪಯೋಗಿಸುತ್ತಾ ಪದ ( Word) ಗಳ ರೂಪಕ್ಕೆ ತಳಪಾಯ ಹಾಕಿದ. ಅಕ್ಷರ ಮಾಲೆಗಳು ವಿಕಾಸಗೊಂಡವು. ಕ್ರಮೇಣ ಪ್ರಾರಂಭವಾದ ಅಕ್ಷರದ ಸುಧೀರ್ಘ ಯಾತ್ರೆ ಇನ್ನೂ ನಡೆಯುತ್ತಲೆ ಇದೆ, ಇರುತ್ತೆ ಸಹ ಕಾನಾನ್ ದೇಶದ ಫಿನೀಷಿಯನ್ನರಲ್ಲಿ ಅಕ್ಷರ ಮಾಲೆಯು

ಅಂಕುರವಾಯಿತೆಂದು ಸಿರಿಯಾದಲ್ಲಿ ದೊರೆತಿರುವ ಶಾಸನಗಳಿಂದ ತಿಳಿದು ಬರುತ್ತವೆ. ಬ್ಯಾಬಿಲೋನ್ ಅರಸನಾದ ಅಹೀರಾಮನು ಈ ಶಾಸನಗಳನ್ನು ಕೆತ್ತಿಸಿರಬಹುದೆಂದು ಊಹಿಸಲಾಗಿದೆ. ಭಾಷೆಯಲ್ಲಿ ಪ್ರಯೋಗ ಮಾಡುವುದರಲ್ಲಿ ಗ್ರೀಕ್‌ರಿಗೆ ಎಲ್ಲಿಲ್ಲದ ಆಸಕ್ತಿ. ಈ ಪ್ರವೃತ್ತಿಯಿಂದಲೇ ತಮ್ಮ ಭಾಷೆಯನ್ನು ಅತ್ಯಂತ ಶ್ರೀಮಂತ ಭಾಷೆಯನ್ನಾಗಿ ಮಾಡಿಕೊಂಡರು. ಮನುಷ್ಯನ ಬದುಕು ಬೆಳೆದಂತೆಲ್ಲಾ ಭಾಷೆಯು ಬೆಳೆಯಿತು. ಅಕ್ಷರ ವಿಶ್ರಾಂತಿ ಕ್ರಮೇಣ ಅಕ್ಷರ ಕಾಂತಿಯಾಯಿತು. ಈ ಬೆಳವಣಿಗೆಗೆ ಸಂದಕಾಲ ಅದೆಷ್ಟೋ! ಕಂಡ ಕಾಲ ಘಟ್ಟಗಳೆಷ್ಟೋ! ಅಕ್ಷರ ಮುದ್ರಣಾಲಯವನ್ನು ಪ್ರವೇಶ ಮಾಡಿದ್ದು ಮನುಷ್ಯ ಇತಿಹಾಸದಲ್ಲಿಯೇ ಅತ್ಯಂತ ರೋಮಾಂಚನ ಘಟ್ಟ. ಜರ್ಮನಿಯ ಗುಟೇನ್‌ಬರ್ಗ್ ಜಗತ್ತಿನ ಮೊದಲ ಪ್ರಿಂಟಿಂಗ್‌ಪ್ರೆಸನ್ನು ಆರಂಭಿಸಿದನು. ಗ್ರಂಥಗಳ ಮುದ್ರಣ ಪ್ರಾರಂಭವೇ ಆಯಿತು. ರಾಬ್ಬಿಡೇವಿಡ್ ಪ್ರಥಮವಾಗಿ (೧೪೭೭) ಹಿಬ್ರೂ ಬೈಬಲನ್ನು ಅಚ್ಚುಮಾಡಿದನು. ಸಂಪೂರ್ಣವಾದ ಬೈಬಲ್ ಮುದ್ರಣಗೊಂಡದ್ದು ೧೪೮೮ರಲ್ಲಿ ೧೪೭೧ರಲ್ಲಿ ಇಟಾಲಿಯನ್, ೧೪೮೭ರಲ್ಲಿ ಫ್ರೆಂಚ್, ೧೫೧೭ರಲ್ಲಿ ಜರ್ಮನ್–ಹೀಗೆ ಬೈಬಲಿನ ಮುದ್ರಣ, ಅನುವಾದಗಳ ಪ್ರಕ್ರಿಯೆ ಒಂದೇ ಸಮನೆ ಸಾಗುತ್ತಾ ಹೋಯಿತು. ಲ್ಯಾಟಿನ್ ಭಾಷೆಯಲ್ಲಿ ಬೈಬಲ್ ಮುದ್ರಣ ಕಂಡಿದ್ದು ೧೫೧೭ರಲ್ಲಿ. ಅಂದಿನಿಂದ ಸುಮಾರು ಐವತ್ತು ವರ್ಷಗಳಲ್ಲಿ ಈ ಭಾಷೆಯೊಂದರಲ್ಲಿಯೇ ೧೦೦ ಸಾರಿ ಬೈಬಲನ್ನು ಮುದ್ರಿಸಿದ್ದಾರೆ. ಅಲ್ಲಿಂದ ಮುಂದೆ ಬೈಬಲ್ ಕಂಡ ಮುದ್ರಣ, ಅನುವಾದ ಪರಿಷ್ಕರಣ ಆವೃತ್ತಿಗಳ ಸಂಖ್ಯೆ ಕೈಗೆ ಸಿಗದು. ಇದುವರೆಗೆ ಬೈಬಲ್ ೨೧೯೬ಕ್ಕೂ ಹೆಚ್ಚಿನ ಭಾಷೆಗಳಿಗೆ ಅನುವಾದಗೊಂಡಿದೆ. ಈ ಪ್ರಮಾಣದ ಅನುವಾದಗಳು ಜಗತ್ತಿನ ಮತ್ತಾವ ಗ್ರಂಥಕ್ಕೂ ದೊರೆತಿಲ್ಲವೆಂಬುದು ಬಹುವಿಶೇಷವಾದ ಸಂಗತಿ. ಯೇಹೂದ್ಯರು ತಮ್ಮ ಪವಿತ್ರ ಗ್ರಂಥವಾದ ಹಳೆ ಒಡಂಬಡಿಕೆಯ ಸುರುಳಿಯನ್ನು 'ಮಂಜೂಷ'ನೆಂಬ ಪೆಟ್ಟಿಗೆಯಲ್ಲಿಟ್ಟು ದೇವಾಲಯದ ಗರ್ಭಗುಡಿಯಲ್ಲಿ ಪ್ರತಿಷ್ಠಾಪಿಸುತ್ತಿದ್ದರು. ಕೇವಲ ಯಾಜಕ ಹಾಗೂ ಪುರೋಹಿತ ವರ್ಗಕ್ಕೆ ಮಾತ್ರ ಆ ಗರ್ಭಗುಡಿಗೆ ಪ್ರವೇಶ. ಕೇವಲ ಅವರು ಮಾತ್ರ ಓದಬಹುದಾಗಿತ್ತು. ಅದಕ್ಕೆ ಅಷ್ಟೊಂದು ಮಡಿ ಲೇಪನವನ್ನು ಮಾಡಿಟ್ಟದ್ದರು. ಜನ ಸಾಮಾನ್ಯರು ಆ ಗ್ರಂಥ ಸುರುಳಿಯನ್ನು ಮುಟ್ಟುವಂತೆಯು ಇರಲಿಲ್ಲ. ಓದುವಂತೆಯೂ ಇರಲಿಲ್ಲ. ಕೇವಲ ದೂರದಿಂದಲೇ ನೋಡಿ ತೃಪ್ತಿಪಟ್ಟುಕೊಳ್ಳಬೇಕಾಗಿತ್ತು. ಆದಿಯಿಂದಲೂ ಜಗತ್ತಿನ ಎಲ್ಲೆಡೆ ಎಲ್ಲಾ ಸಂದರ್ಭಗಳಲ್ಲಿ ಧರ್ಮಗ್ರಂಥಗಳ ಉಪಯೋಗ ಹಾಗು ದುರುಪಯೋಗಮಾಡಿಕೊಂಡವರೇ ಪುರೋಹಿತ ವರ್ಗ. ಬೈಬಲ್ ಬೇರೆಬೇರೆ ಭಾಷೆಗಳಿಗೆ

ಅನುವಾದಗೊಂಡಿದ್ದು, ಮುದ್ರಣಗೊಂಡು ಎಲ್ಲರ ಕೈಗೆ ಸಿಕ್ಕಿದ್ದು ಜನಸಾಮಾನ್ಯರಿಗೆ ಸಿಕ್ಕ ಒಂದು ಅಪೂರ್ವ ಕೊಡುಗೆ ಇಸ್ರಾಯೇಲರು ಸುಮಾರು ವರ್ಷಗಳ ಕಾಲ ಈಜಿಪ್ಟ್‌ನ್ನರ ಗುಲಾಮರಾಗಿದ್ದು ಪಟ್ಟ ಬವಣೆ ಅಗಾಧ. ಈ ಅವಧಿ ಆ ಜನಾಂಗದ ಇತಿಹಾಸದಲ್ಲಿ ಅತ್ಯಂತ ದುರಂತಮಯ ಕಾಲ. ದಿಕ್ಕೆಟ್ಟ ಆ ಜನಾಂಗವನ್ನು ಪ್ರವಾದಿ ಮತ್ತು ಜನನಾಯಕನಾದ ಮೋಶೆ (Moses ) ತುಂಬಾ ಅದ್ಭುತವಾಗಿ ಮುನ್ನಡಿಸಿ 'ಹಾಲು ಜೇನು ಹರಿಯುವ' ಸಿನಾಯ್ ಬೆಟ್ಟದ ಪಕ್ಕದ ನಾಡಿಗೆ ಕರೆದೊಯ್ದನು. ತೀವ್ರ ಕಷ್ಟಕಾರ್ಪಣ್ಯಗಳ ನಡುವೆಯೂ ಅವರಿಗೆ ಬೆಳಕು ದೊರೆತ ಪ್ರಯಾಣವಿದು. ಸುಮಾರು ನಲವತ್ತು ವರ್ಷಗಳ ಸುದೀರ್ಘ ಪ್ರಯಾಣ ಸಿನಾಯ ಪರ್ವತದಲ್ಲಿ ಮುಗಿಯಿತು. ಹಳೆ ಒಡಂಬಡಿಕೆ ಗ್ರಂಥದಲ್ಲ ಈ ಪರ್ವತಕ್ಕೆ ತನ್ನದೇ ಆದ ಒಂದು ಅತ್ಯಂತ ಮಹತ್ವದ ಸ್ಥಾನವಿದೆ. ಇದು, ದೇವರು ಇಸ್ರಾಯೇಲರೊಡನೆ ಮಾಡಿಕೊಂಡ ಒಪ್ಪಂದದ ಒಡಂಬಡಿಕೆಯ ಸ್ಥಳ. ಈ ಎಲ್ಲಾ ಪ್ರಕ್ರಿಯಯ ಮುಂಚೂಣಿಯಲ್ಲಿದ್ದ ಮೋಶೆಯ ಪಾತ್ರ ಬಹು ಮುಖ್ಯ. ಈ ನೊಂದ ಜೀವಿಗಳನ್ನು ಸಂಘಟಿಸಿ, ಅವರಲ್ಲಿ ಹೊಸ ನಂಬಿಕೆ ನಿರೀಕ್ಷೆಗಳನ್ನು ತುಂಬಿ ಹೊಸ ಹೆಜ್ಜೆಗಳನ್ನು ಇಡುವಂತೆ ಮಾಡಿದ ಮೋಶೆಯದು ಬಹು ವರ್ಣಮಯ ವ್ಯಕ್ತಿತ್ವ. ಹಳೆ ಒಡಂಬಡಿಕೆ ಗ್ರಂಥವು ಪ್ರವಾದಿ ಮೋಶೆಯನ್ನು ಕುರಿತು ಹೀಗೆ ಹೇಳುತ್ತದೆ. "........ಯೆಹೋವನು ಮೋಶೆಯ ಸಂಗಡ ಮುಖಾಮುಖಿಯಾಗಿ ಮಾತನಾಡಿದನು. ಆತನು ಐಗುಪ್ತ ದೇಶದಲ್ಲಿ ಫರೋಹನ ಮುಂದೆಯೂ ಅವರ ಪ್ರಜಾಪರಿವಾರದವರ ಮುಂದೆಯೂ ವಿಧವಿಧವಾದ ಅದ್ಭುತ ಮಹತ್ಕಾರ್ಯಗಳನ್ನು ನಡೆಸುವುದಕ್ಕೆ ಯೆಹೋವನು ಅವನನ್ನು ಕಳುಹಿಸಿದನು. ಇಸ್ರಾಯೇಲರ ಮುಂದೆ ವಿಶೇಶವಾದ ಭುಜ ಪ್ರರಾಕ್ರಮವನ್ನು ಭಯಂಕರ ಕಾರ್ಯಗಳನ್ನು ನಡೆಸಿದನು. ಇಂಥವನಿಗೆ ಸಮಾನವಾದ ಮತ್ತೊಬ್ಬ ಪ್ರವಾದಿ ಈಚೆಗೆ ಇಸ್ರಾಯೇಲರಲ್ಲಿ ಹುಟ್ಟಲೇ ಇಲ್ಲ". (ಧರ್ಮೋಪದೇಶಕಾಂಡ, ೩೪: ೯–೧೨). ಇಂತಹ ಮೋಶೆ ಇಸ್ರಾಯೇಲರ ಈ ಪ್ರಯಾಣದ ಸುದೀರ್ಘ ಇತಿಹಾಸವನ್ನು, ಒಡಂಬಡಿಕೆಯ ಎಲ್ಲಾ ವಿವರಗಳನ್ನು ಬರೆದವನೆಂದು ಪ್ರಾಚೀನ ಯೆಹೂದಿ ಪರಂಪರೆ ಹಾಗು ಕ್ರೈಸ್ತ ಪರಂಪರೆಗಳು ಹೇಳುತ್ತವೆ. ಜಗತ್ತಿನ ಕಾಲಮಾನದಲ್ಲಿ ಭಾಷೆ ಮೌಖಿಕ ಪರಂಪರೆಯಿಂದ ಲಿಪಿ ಪರಂಪರೆಗೆ ಬಂದಾಗ ಮೊದಲು ಅಕ್ಷರ ಕಂಡ ಗ್ರಂಥ ಬೈಬಲ್, ಹೀಗಾಗಿ ಜಗತ್ತಿನ ಬದುಕು ಮತ್ತು ಚಿಂತನೆಯ ಮೇಲೆ ಇದರ ಪ್ರಭಾವ ಅಷ್ಟಿಷ್ಟಲ್ಲ.

**೩.೪ ಬೈಬಲ್ ಪ್ರಸಾರಗೊಂಡ ಭಾಷೆಗಳು:**

ಮನುಷ್ಯನ ಬದುಕಿನಲ್ಲಿ ಭಾಷೆ ವಿಕಾಸಗೊಂಡಿರುವುದನ್ನು ಅಧ್ಯಯನ ಮಾಡುವುದೇ ಒಂದು ರೋಮಾಂಚಕ ಅಧ್ಯಯನ. ಬೈಬಲಿನ ಮೂಲ ಭಾಷೆ – ಹೀಬ್ರೂ, ಅರಾಮಿಕ್ ಮತ್ತು ಗ್ರೀಕ್, ಮೊದಲೆರಡು ಭಾಷೆಗಳು ಸೆಮಿಟಿಕ್ ಗುಂಪಿಗೆ ಸೇರಿದ್ದು, ಗ್ರೀಕ್ ಇಂಡೋ–ಯುರೋಪಿಯನ್ ಪಂಗಡಕ್ಕೆ ಸೇರಿದೆ. ಈ ಮೂರು ಭಾಷೆಗಳ ಪ್ರಾಥಮಿಕ ಜ್ಞಾನವಿಲ್ಲದೆ ಹೋದರೆ ಬೈಬಲ್ ಅಧ್ಯಯನ ಅಪೂರ್ಣ.

**೩.೪.೧ ಹೀಬ್ರೂ ಭಾಷೆ:**

ಬೈಬಲಿನ ಬರವಣಿಗೆ ಪ್ರಪ್ರಥಮ ಉಪಯೋಗಿಸಿಕೊಂಡ ಭಾಷೆ ಹೀಬ್ರೂ. ಪ್ರಸ್ತುತ ಇದು ಇಸ್ರಾಯೇಲ್ ದೇಶದ ರಾಷ್ಟ್ರೀಯ ಭಾಷೆ. ಅಲ್ಲಿಯ ಜನರು ಈ ಭಾಷೆಯನ್ನು 'ಕಾನೂನಿನ ಭಾಷೆ', 'ಯೂದಾಯದ ಭಾಷೆ' ಎಂದು ಕರೆಯುತ್ತಿದ್ದರೆಂದು ಹಳೆ ಒಡಂಬಡಿಕೆಯಿಂದ ತಿಳಿಯುತ್ತದೆ. ಹೀಬ್ರೂ ಭಾಷೆಯಲ್ಲಿ ಬರೆದಿರುವುದನ್ನು ಇನ್ನೊಂದು ಭಾಷೆಗೆ ಅನುವಾದಿಸುವಾಗ ಮೂಲಭಾಷೆಯ ಶಕ್ತಿ ಅನುವಾದಕ್ಕೆ ಬರುವುದಿಲ್ಲವೆನ್ನುವ ಒಂದು ಅಭಿಪ್ರಾಯವಿದೆ. ಈ ಅಭಿಪ್ರಾಯವನ್ನು ಪ್ರತ್ಯೇಕವಾಗಿ ಹೀಬ್ರೂ ಭಾಷೆಗೆ ಹೇಳಿದ್ದರೂ ಸಾರ್ವತ್ರಿಕವಾಗಿ ಎಲ್ಲಾ ಮೂಲ ಭಾಷೆಗಳ ಕೃತಿಗಳಿಗೆ ಮುಖ್ಯವಾಗಿ ಎಲ್ಲಾ ಧಾರ್ಮಿಕ ಮೂಲ ಭಾಷೆಗಳಿಗೂ ಈ ಮಾತು ಅನ್ವಯಿಸುತ್ತದೆ. ಧಾರ್ಮಿಕ ಭಾಷೆಗಳಲ್ಲಿ ಮಡಿವಂತಿಕೆಗಳು ಹೆಪ್ಪುಗಟ್ಟಿದ ಹಾಗೆ ಆ ಭಾಷೆ ತನ್ನ ಕವಚದಿಂದಲೇ ಹೊರ ಬರುವುದಿಲ್ಲ. ಇದರಿಂದ ಅನೇಕ ಸಾಮಾಜಿಕ, ಸಾಂಸ್ಕೃತಿಕ ಹಾಗೂ ಭಾಷಾ ಸಮಸ್ಯೆಗಳು ಉಂಟಾಗುತ್ತವೆ. ಕಟ್ಟಿಟ್ಟ ನೀರು ಎಂದೂ ಒಳ್ಳೆಯದಲ್ಲ, ಹಾಗೆ ಭಾಷೆ ಸಹ ಜೀವಂತವಾಗಿರುವ ಭಾಷೆಯೊಂದು ಸಿಕ್ಕಿದೆಲ್ಲವನ್ನು ತನ್ನದಾಗಿಸಿಕೊಂಡು ಹರಿಯುತ್ತಲೇ ಬೆಳೆಯುತ್ತದೆ. ಹಳೆ ಒಡಂಬಡಿಕೆಯ ಮುಕ್ಕಾಲು ಭಾಗ ಹೀಬ್ರೂ ಭಾಷೆಯಲ್ಲಿದೆ. ಅಂದರೆ ಅದನ್ನು ಬರೆಯುವಾಗ (ಕ್ರಿ.ಪೂ ೯೫೦–೧೦೦) ಹೀಬ್ರೂ ಬಹಳ ಜೀವಂತ ಭಾಷೆಯಾಗಿತ್ತು. ಅನೇಕ ಶತಮಾನಗಳಿಂದ ಹೀಬ್ರೂ ಭಾಷೆಯಲ್ಲಿ ಹೇಳಿಕೊಳ್ಳಬಹುದಾದ ಯಾವ ಭಾಷಾ ಮಾರ್ಪಾಡುಗಳು ಆಗಲಿಲ್ಲವೆನ್ನುವುದು ಭಾಷಾ ಪಂಡಿತರ ಅಭಿಪ್ರಾಯ.

**೩.೪.೨: ಅರಾಮಾಯಿಕ್ ಭಾಷೆ:**

ಪಶ್ಚಿಮ ಏಶಿಯಾದ ಪಶುಪಾಲನ ಕುಲದವರಲ್ಲಿ ಅಥವಾ ಅರಾಮ್ಯರೆಂಬ ಅಲೆಮಾರಿ ಬುಡಕಟ್ಟು ಜನರಲ್ಲಿ ಈ ಭಾಷೆಯಿತ್ತು. ಅರಾಮ್ಯರು ರಾಜ್ಯಕಟ್ಟಿ ಬೆಳೆಸಲಿಲ್ಲ. ಹಾಗೆಯೇ ಅವರ ಭಾಷೆಯೂ ಬೆಳೆಯಲಿಲ್ಲ. ಅರಾಮ್ಯರು ಸಣ್ಣಪುಟ್ಟ ರಾಜ್ಯಗಳನ್ನು ಕಟ್ಟಿಕೊಂಡು ಪಾಳೆಗಾರರಾಗಿಯೇ ಉಳಿದವರು. ಅಸ್ಸಿರಿಯಾ, ಬ್ಯಾಬಿಲೋನಿಯಾ, ಹಾಗು ಪರ್ಶಿಯಾ ದೇಶಗಳಲ್ಲಿ ಈ ಭಾಷೆ ಪ್ರಬಲವಾಗಿತ್ತು. ಪರ್ಶಿಯನ್ನರು ಅರಾಮಾಯಿಕ್ ಭಾಷೆಯನ್ನು ಭಾರತಕ್ಕೂ ತಂದರು. ಅಶೋಕನ ಅನೇಕ ಶಿಲಾಶಾಸನಗಳು ಈ ಭಾಷೆಯಲ್ಲಿವೆ. ಅರಾಮಿಕ್ ಭಾಷೆಯನ್ನು ಪ್ರಾಚೀನ ಅರಾಮಾಯಿಕ್, ಆಡಳಿತದ ಅರಾಮಾಯಿಕ್, ನವ್ಯ ಅರಾಮಾಯಿಕ್ – ಎಂದೆಲ್ಲಾ ಇತಿಹಾಸಕಾರರು ವರ್ಣಿಸುತ್ತಾರೆ. ಅಲ್ಲದೆ ಇದು ಆಡು ಭಾಷೆಯಾಗಿ ಅನೇಕ ಕವಲುಗಳಾಗಿ ಒಡೆದುಕೊಂಡು ಯೆಹೂದ್ಯ ಅರಾಮಾಯಿಕ್, ಪೂರ್ವ ಅರಮಾಯಿಕ್‌ಗಳೆಂದು ಇದ್ದವು. ಯೇಸುಕ್ರಿಸ್ತನ ಆಡುಭಾಷೆ ಅರಾಮಾಯಕ್ ಆದರೂ ಅವನಿಗೆ ಗ್ರೀಕ್ ಹಾಗೂ ಹೀಬ್ರೂ ಭಾಷೆಗಳಲ್ಲಿ ಒಳ್ಳೆಯ ಪ್ರಾವೀಣ್ಯತೆಯಿತ್ತು. ಅರಮಾಯಿಕ್ ಭಾಷೆಗೆ ತರ್ಜುಮೆಯಾದ ಹಳೆ ಒಡಂಬಡಿಕೆಯನ್ನು "ತಾರ್ಗುಮ್" ಎಂದು ಕರೆಯುತ್ತಾರೆ. ಕ್ರಿ.ಪೂ ೫೮೭ರಲ್ಲಿ ಯೇರುಸಲೇಮಿನ ಅವನತಿಯಾಯಿತು. ಯೆಹೂದ್ಯರೆಲ್ಲಾ ಬ್ಯಾಬಿಲೋನಿಗೆ ಗಡಿಪಾರಾದರು. ಅರಾಮಾಯಿಕ್ ಭಾಷೆ ವ್ಯಾಪಾರ ವಾಣಿಜ್ಯದ ಭಾಷೆಯಾಗಿ ಪಾಲಸ್ತೈನ್‌ನ ಮೇಲೂ ತನ್ನ ಪ್ರಭಾವವನ್ನು ಬೀರಿತು. ಹೀಬ್ರೂ ಭಾಷೆ ಕ್ರಮೇಣ ಬಲಹೀನವಾಯಿತು. ಯೆಹೂದ್ಯ ಪ್ರಾರ್ಥನಾ ಮಂದಿರಗಳಲ್ಲೂ ಅರಾಮಾಯಿಕ್ ಭಾಷೆಗೆ ಸ್ಥಾನ ದೊರೆಯಿತು. ಆದುದರಿಂದ ಹೀಬ್ರೂ ಭಾಷೆಯ ಹಳೆ ಒಡಂಬಡಿಕೆ ಅರಾಮಾಯಕ್ ಭಾಷೆಗೆ ಭಾಷಾಂತರವಾಗುವುದು ಅನಿವಾರ್ಯವಾಯಿತು.

**೩.೪.೩: ಗ್ರೀಕ್ ಭಾಷೆ:**

ಗ್ರೀಸ್ ದೇಶದ ಈ ಭಾಷೆ ಅಲೆಗ್ಸಾಂಡರ್ ಮಹಾಶಯನ ದಂಡಯಾತ್ರೆಯ ಪರಿಣಾಮವಾಗಿ ಏಷ್ಯಾ ಹಾಗೂ ಈಜಿಪ್ಟ್‌ಗಳಲ್ಲಿ ಪ್ರಸರಣಗೊಂಡಿತು. ಬೈಬಲಿನ "ಪ್ರರಮಗೀತ" ಹಾಗೂ ಹೊಸ ಒಡಂಬಡಿಕೆಯ ಪುಸ್ತಕಗಳು ಗ್ರೀಕ್ ಭಾಷೆಯಲ್ಲಿವೆ. ಸ್ಲಾವಿಕ್, ಸೆಲ್ವಿಕ್, ಜೆರ್ಮಾನಿಕ್, ಅಲ್ಬೇನಿಯನ್, ಹಿಟ್ಟೈಟ್, ತೊಕಾರಿಯನ್ (ತುರ್ಕಿಸ್ಥಾನದ ಭಾಷೆ) ಭಾಷೆಗಳ ಗುಂಪಿಗೆ ಸೇರಿರುವ ಗ್ರೀಕ್ ಅಂದಿನ ಭಾರತ ಮತ್ತು ಯುರೋಪ್‌ಗಳ ಸಂಪರ್ಕ ಭಾಷೆಯೂ ಆಗಿತ್ತು. ಸಾರ್ಕೆಟೀಸ್,

ಪ್ಲೇಟೋ ಅರಿಸ್ಟಾಟಲ್ ಮೊದಲಾದ ಗ್ರೀಕ್ ತತ್ವಜ್ಞಾನಿಗಳು ಈ ಭಾಷೆಯನ್ನು ಚೆನ್ನಾಗಿ ದುಡಿಸಿಕೊಂಡಿದ್ದರು.

**೩.೪.೪: ಲ್ಯಾಟಿನ್ ಭಾಷೆ:**

ಇದು ಇಂಡೋ-ಯುರೋಪಿಯನ್ ಭಾಷೆ. ಇದರ ಮೂಲ ನೆಲೆ ರೋಮ್. ರೋಮ್ ಸಾಹಿತ್ಯ ಸಂಸ್ಕೃತಿ ಹೋದಲಲೆಲ್ಲಾ ಈ ಭಾಷೆಯೂ ಹೋಗಿದೆ. ಕ್ರಿ.ಶ. ೬೩ರಲ್ಲಿ ರೋಮ್ ಚಕ್ರವರ್ತಿ ಪಾಂಪೆ ಯೆರುಸಲೇಮಿಗೆ ಪ್ರವೇಶ ಮಾಡಿದಂದಿನಿಂದ ರೋಮನ್ನರ ಅಸ್ತಿತ್ವ ಸ್ಪಷ್ಟವಾಗಿ ಕಾಣುತ್ತದೆ. ಅಲ್ಲಿಂದ ಮುಂದೆ ರೋಮನ್ ಸೈನಿಕ ಭಾಷೆಯಾದ ಲ್ಯಾಟಿನ್ ಅಧಿಕೃತ ಭಾಷೆಯಾಗಿ ಜಾರಿಗೆ ಬಂದಿತು. ಗ್ರೀಕ್ ಬಹಳ ಶ್ರೀಮಂತ, ಪ್ರಭಾವಶಾಲಿ ಭಾಷೆಯಾದುದರಿಂದಲೂ ಹಾಗೂ ಗ್ರೀಕ್ ವಸ್ತು ವಿನ್ಯಾಸಗಳ ಬಗ್ಗೆ ಅವರಿಗೆ ಹೆಚ್ಚಿನ ಆಸಕ್ತಿಯಿದ್ದುದರಿಂದ ಅವರ ಒಲವು ಸಹಜವಾಗಿ ಗ್ರೀಕ್‌ನತ್ತ ತಿರುಗಿ ಕೇವಲ ಸೈನಿಕ ಕ್ಷೇತ್ರದಲ್ಲಿ ಮಾತ್ರ ಲ್ಯಾಟಿನ್ ಉಳಿಯಿತು. ಸಹಜವಾಗಿ ಈ ಮಿಶ್ರಭಾಷೆಗಳು ತಮ್ಮ ಬೆಳವಣಿಗೆಗೆಯಲ್ಲಿ ಬೇರೆ ಭಾಷೆಗಳ ಪ್ರಭಾವಗಳನ್ನು ಪರಸ್ಪರ ಪಡೆದು ಈ ಬಹುಭಾಷಾ ಸಂಸ್ಕೃತಿಗಳ ಮಧ್ಯೆಯಲ್ಲಿದ್ದವು.

ಕ್ರಿಸ್ತನು ಬದುಕಿ ಬಾಳಿದ್ದು ಅರಾಮಾಯಿಕ್ ಭಾಷಾ ಪರಿಸರದಲ್ಲಿ ಆತನು ತಿರುಗಾಡಿದ ಬೆಟ್ಟಗುಡ್ಡ ತೋಟ ಹಳ್ಳಿಪಟ್ಟಣ ತೀರ ಪ್ರದೇಶಗಳೆಲ್ಲವೂ ಅರಾಮಾಯಿಕ್, ಆತನ ಬೋಧನೆಗಳೆಲ್ಲವೂ ಅರಾಮಾಯಿಕ್. ಆದರೆ ಕ್ರಿಸ್ತನೊಡನೆ ಬಂದ ಹೊಸ ಒಡಂಬಡಿಕೆ ಗ್ರಂಥ ಮಾತ್ರ ಗ್ರೀಕ್ ಭಾಷೆಯಲ್ಲಿತ್ತು. ಅರಾಮಾಯಿಕ್ ಒಂದು ಸ್ಥಳೀಯ ಭಾಷೆಯಾಗಿದ್ದು ಅದಕ್ಕೆ ತನ್ನದೇ ಆದ ಸಂವಹನ ಇತಿಮಿತಿಗಳಿದ್ದವು. ಗ್ರೀಕ್ ತುಂಬ ಶಕ್ತಿಯುತ ಭಾಷೆ. ಇದಕ್ಕೆ ದುಡಿಸಿಕೊಳ್ಳಬಹುದಾದ ಸಾಧ್ಯತೆಗಳು ನೂರಾರು. ಇದಕ್ಕೆ ಜಗತ್ತಿನೊಡನೆ ಸಂವಾದಿಸುವ ಶಕ್ತಿ ಬಲವಾಗಿದೆ. ಇಡೀ ಜಗತ್ತಿಗೆ ತೆರೆದುಕೊಂಡಿದ್ದ ಈ ಭಾಷೆಯ ಮೂಲಕ ಕ್ರಿಸ್ತನ ನುಡಿಸಾಮ್ರಾಜ್ಯ ಲೋಕದೆಲ್ಲೆಡೆ ಹರಡಲು ಅನುಕೂಲವಾಯಿತು. ಗ್ರೀಕ್ ಭಾಷೆಯಿಂದ ಮುಂದೆ ನೂರಾರು ಭಾಷೆಗಳಿಗೆ ಬೈಬಲ್ ಅನುವಾದವಾಯಿತು. ಆರಂಭದಿಂದಲೇ ಹೊಸ ಒಡಂಬಡಿಕೆ ಒಂದು ಭಾಷೆಯಿಂದ ಮತ್ತೊಂದು ಭಾಷೆಗೆ, ಒಂದು ನೆಲದಿಂದ ಮತ್ತೊಂದು ನೆಲಕ್ಕೆ, ಒಂದು ಸಂಸ್ಕೃತಿಯಿಂದ ಮತ್ತೊಂದು ಸಂಸ್ಕೃತಿಗೆ ಅನುವಾದವಾಗುತ್ತಾ ಬಂದಿರುವುದು ಗಮನಾರ್ಹ. ಈ ಭಾಷಾಂತರಗಳು ಎಷ್ಟೊಂದು ಗಾಢವಾಗಿದೆಯೆಂದರೆ ಬೈಬಲಿನ ಮೂಲಭಾಷೆ, ಮೂಲ ಭಾಷಾಂತರ ಯಾವುದೆಂದು ಹೇಳುವುದೇ ಕಷ್ಟವೆನಿಸುವ ಸಂದರ್ಭವೂ ಇದೆ. ಒಮ್ಮೊಮ್ಮೆ ಈ ಭಾಷಾಂತರಗಳ

ಸಂಕೀರ್ಣತೆಯನ್ನು ಅರ್ಥಮಾಡಿಕೊಳ್ಳಲು ಭಾಷಾಂತರಗಾರರ ಸಾಹಿತ್ಯಿಕ ಹಾಗೂ ಸಾಂಸ್ಕೃತಿಕ ಹಿನ್ನೆಲೆಯನ್ನು ಅರ್ಥಮಾಡಿಕೊಳ್ಳಬೇಕಾಗುತ್ತದೆ. ಆದುದರಿದಲೇ ಬೈಬಲಿನ ಅತ್ಯುತ್ತಮ ಭಾಷಾಂತರ ಯಾವುದು ಎಂದು ನಿರ್ಧರಿಸುವುದು ಕಷ್ಟ, ಜೊತೆಗೆ ಗ್ರೀಕ್ ಸಹ ತುಂಬ ಕ್ಲಿಷ್ಟವಿರುವುದರಿಂದ ಈ ಸಮಸ್ಯೆ ಇನ್ನೂ ಗಾಢವಾಗಿದೆ. ಕ್ರಿಸ್ತನ ಮಾತುಗಳನ್ನು ಸರಿಯಾಗಿ ಅರ್ಥಮಾಡಿಕೊಳ್ಳಲು ಆತನ ಭಾಷಾ ಸಂಸ್ಕೃತಿಯನ್ನು ತಿಳಿಯಬೇಕಾಗುತ್ತದೆ.

**೩.೫: ಮೌಖಿಕ ಸಂಸ್ಕೃತಿ ಮತ್ತು ಲಿಪಿ ಸಂಸ್ಕೃತಿ:**

ಹಳೆ ಒಡಂಬಡಿಕೆಯ ಅನೇಕ ಭಾಗಗಳು ಲಿಖಿತ ರೂಪಕ್ಕೆ ಬರುವ ಮುನ್ನ ಅದು ಮೌಖಿಕ ಸಂಸ್ಕೃತಿಯಲ್ಲಿಯೇ ಇತ್ತು. ದೈವೋಕ್ತಿಗಳು, ಜ್ಞಾನೋಕ್ತಿಗಳು, ಪ್ರವಾದನೆಗಳು, ಆರಾಧನಾ ವಿಧಿಗಳು, ಹಾಡುಗಳು – ಇವೆಲ್ಲವೂ ಕಂಠಸ್ಥವಾಗಿದ್ದವು. ಜನಪದದ ಈ ಪರಂಪರೆ ಬಹಳ ವಿಶೇಷವಾಗಿದ್ದು ಕ್ರಮೇಣ ಕೆಲವು ಅನಾಮಿಕ ವ್ಯಕ್ತಿಗಳು, ಜನ ಸಮುದಾಯದವರು ಇಂತಹ ಮೌಖಿಕ ಪರಂಪರೆಯನ್ನು ಲಿಪಿ ಸಂಸ್ಕೃತಿಗೆ ತಂದರು. ಮಾತಿನ ಸಂಸ್ಕೃತಿ ಅಕ್ಷರ ಸಂಸ್ಕೃತಿಗಿಳಿಯಿತು. ಕಾಲಚಕ್ರ ಉರುಳಿದಂತೆ ಧರ್ಮಶಾಸ್ತ್ರವು ಲಿಪಿರೂಪ ಪಡೆಯಿತು. ಕ್ರಮೇಣ ತಿದ್ದುಪಡಿ, ಹೊಸಹೊಸ ಭಾಗಗಳ ಸೇರ್ಪಡೆ ಗದ್ಯ, ಪದ್ಯ, ವ್ಯಾಖ್ಯಾನ, ಟೀಕೆ ಟಿಪ್ಪಣಿಗಳು ಬೆಳೆಯುತ್ತಾ ಹೋದವು. ಬರಹಗಳೆಲ್ಲವೂ ಹಸ್ತಪ್ರತಿಯ ಮೇಲೆ ಆದವು. ಹಸ್ತಪ್ರತಿಗಳನ್ನು ಸುರುಳಿಗಳ ರೂಪದಲ್ಲಿ ರಚಿಸಿ ಯಾಜಕರ, ಪ್ರವಾದಿಗಳ, ಜ್ಞಾನಿಗಳ ಕೈಗಳಿಗೆ ಒಪ್ಪಿಸಿದರು. ಕೆಲವರು ಅವುಗಳನ್ನು ಪೂಜ್ಯವೆಂದು ಭಾವಿಸಿ ಪ್ರತ್ಯೇಕವಾಗಿ ಇಟ್ಟರೆ ಕೆಲವರು ಅವುಗಳನ್ನು ದೇವಾಲಯಗಳಲ್ಲಿ, ಉಗ್ರಾಣಗಳಲ್ಲಿ, ಗ್ರಂಥಾಲಯಗಳಲ್ಲಿ ಬಹು ಸುರಕ್ಷಿತವಾಗಿಟ್ಟರು. ಇನ್ನು ಕೆಲವರು ಅವುಗಳನ್ನು ರಹಸ್ಯವಾಗಿಯೂ ಇಟ್ಟರು. ಆಸಕ್ತ ಅನುಕೂಲಸ್ಥರು ಅವುಗಳನ್ನು ಪ್ರತಿಮಾಡಿಸಿ ಹಂಚುವ ಸಂಪ್ರದಾಯವನ್ನು ಇಟ್ಟುಕೊಂಡಿದ್ದರು. ಕ್ರಮೇಣ ವಿದ್ವಾಂಸರು ಸುರುಳಿ ರೂಪದಲ್ಲಿದ್ದ ಹಸ್ತಪ್ರತಿಗಳನ್ನು ಸಂಪಾದಿಸಿ ಅವುಗಳನ್ನು ಗ್ರಂಥರೂಪಕ್ಕೆ ತಂದರು.

ಮೂಲತಹ ಇಸ್ರಾಯೇಲರು ಸೆಮೆಟಿಕ್ ಜನಾಂಗದವರು. ಅವರು ಸ್ವಭಾವತಃ ಬರವಣಿಗೆಯಲ್ಲಿ ವಿಶ್ಲೇಷಣಾ ಭಾಷೆಯನ್ನು (Analytical) ಬಳಸುತ್ತಿರಲಿಲ್ಲ. ವಿಷಯಗಳ ಸಾರಾಂಶಗಳನ್ನು ಗ್ರಹಿಸಿ ಹೇಳುತ್ತಿದ್ದರೆ ವಿನಹ ಅವುಗಳನ್ನು ವಿಶ್ಲೇಷಿಸಿ ವಿವರವಾಗಿ ಹೇಳುತ್ತಿರಲಿಲ್ಲ. ಅವರದು ಮುಖ್ಯ ಸಿಂಥೆಟಿಕ್ ಮಾರ್ಗ. ಬೇರೆ ಬೇರೆ ಭಾಗಗಳನ್ನು ಹಾಗು ಪರಸ್ಪರ ಸಂಬಂಧವುಳ್ಳ ಭಾಗಗಳನ್ನು ಒಂದುಗೂಡಿಸುತ್ತಿದ್ದರು. ಈ ಕಾರಣದಿಂದ ಹೀಬ್ರೂ

ಭಾಷೆಯಲ್ಲಿ ಸಮುದಾಯ ವಾಚಕಗಳು ಹೇರಳವಾಗಿವೆ. ಭಾವನೆಗಳನ್ನು ಭಾವವಾಚಕಗಳ ಮೂಲಕ ವ್ಯಕ್ತಪಡಿಸದೆ ವಸ್ತು ವಾಚಕಗಳ ಮೂಲಕ ಬರೆಯುತ್ತಿದ್ದರು. ಕೋಪಕ್ಕೆ 'ಆಫ್' ಅಂದರೆ ಮೂಗು, ಕರುಣೆಗೆ ಕರುಳು ಎಂಬ ಪದವನ್ನು ಉಪಯೋಗಿಸುತ್ತಿದ್ದರು. ಆ ಜನರ ಬದುಕು ಭಾಷೆ ಸಂಸ್ಕೃತಿಯನ್ನು ಅಧ್ಯಯನ ಮಾಡಲು ಬೈಬಲ್ ತುಂಬ ಸಹಾಯ ಮಾಡುತ್ತದೆ. ಇಲ್ಲಿ ಎಲ್ಲಾ ಕಡೆಗಳಲ್ಲೂ ಕರಾರುವಕ್ಕಾದ ಇತಿಹಾಸವನ್ನು ನಿರೀಕ್ಷಿಸುವಂತಿಲ್ಲ. ಹಳೆ ಒಡಂಬಡಿಕೆಯ ಕೆಲವು ಭಾಗಗಳಂತೂ ಇತಿಹಾಸದ ಚೌಕಟ್ಟಿಗೆ ಒಳಪಡುವುದಿಲ್ಲ. ಆದರೆ ಹೊಸ ಒಡಂಬಡಿಕೆಯ ಭಾಗಗಳು ಇತಿಹಾಸ ಈ ಗ್ರಂಥವನ್ನು ಬರೆದವರಿಗೆ ಇತಿಹಾಸವನ್ನು ಗುರುತಿಸುವುದಕ್ಕಿಂತ ಮುಖ್ಯವಾಗಿ ದೈವನಂಬಿಕೆಯನ್ನು ದೃಢಪಡಿಸುವುದೇ ಮುಖ್ಯವಾಗಿತ್ತು.

### ೩.೬: ಜಂಬುಕಾಗದ-ಚರ್ಮಕಾಗದ:

ಹಳೆ ಒಡಂಬಡಿಕೆ ಹಾಗು ಹೊಸ ಒಡಂಬಡಿಕೆಯ ಬರಹಗಳೆಲ್ಲಾ ಹಸ್ತಪ್ರತಿ ರೂಪದಲ್ಲಿಯೇ ಇದ್ದವು. ಹಸ್ತಪ್ರತಿಯನ್ನು ಬರೆಯುವುದೆಂದರೆ ಬಹು ಪರಿಶ್ರಮದ ಕೆಲಸ. ಇದಕ್ಕೆ ತದೇಕ ಚಿತ್ತ ಹಾಗು ಬರೆಯುವ ಧೀಶಕ್ತಿ ತೀರಾ ಅಗತ್ಯ. ಹಸ್ತಪ್ರತಿ ಕ್ಷೇತ್ರಕ್ಕೆ ಪ್ರವೇಶಿಸಿದೊಡನೆ ನೂರಾರು ಪ್ರಶ್ನೆಗಳ ಸುರಿಮಳೆ ನಮ್ಮನ್ನು ಕಾಡುತ್ತವೆ. ಸಾಮಾನ್ಯವಾಗಿ ಎಲ್ಲರನ್ನು ಬಡಿದೆಬ್ಬಿಸುವ ಎರಡು ಪ್ರಶ್ನೆಗಳು-ಲಿಪಿಗಳನ್ನು ಕಂಡು ಹಿಡಿದವರು ಯಾರು? ಮೊಟ್ಟ ಮೊದಲನೆ ಪ್ರತಿಯನ್ನು ಯಾವಾಗ ಬರೆದರು? ಈ ಪ್ರಶ್ನೆಗಳು ನಮ್ಮನ್ನು ಬರವಣಿಗೆಯ ಪ್ರಾಚೀನತೆ ಹಾಗು ತತ್ಸಂಬಂಧ ಹತ್ತಾರು ಮೂಲಪ್ರಶ್ನೆಗಳಿಗೆ ಕರೆದೊಯ್ಯುತ್ತವೆ. ಲಿಪಿಗಳ ಅಧ್ಯಯನವೇ ಒಂದು ಪ್ರತ್ಯೇಕಶಾಸ್ತ್ರ. ಇದು ಎಲ್ಲರಿಂದ ಆಗದ ಮಾತು. ಪ್ರೌಢವಿದ್ವತ್ತಿನ ಸಂಗಡ ಜಗತ್ತನ್ನೇ ಮರೆತು ತಲೆ ತಗ್ಗಿಸಿಕೊಂಡೇ ಮಾಡಬೇಕಾದ ಒಂದು ಮನೋಸ್ಥಿತಿ ಇದಕ್ಕೆ ತೀರಾ ಅಗತ್ಯ. ಹಸ್ತಪ್ರತಿಗಳ ಬರವಣಿಗೆಗೆ ಏಕರೀತಿಯಲ್ಲಿ ಸಮಾನವಾಗಿರುವುದಿಲ್ಲ. ಪ್ರತಿಯೊಬ್ಬ ಲಿಪಿಗಾರನು ತನ್ನದೆ ಆದ ಲಿಪಿ ಶೈಲಿಯನ್ನು ಹೊಂದಿರುತ್ತಾನೆ. ಕನಿಷ್ಠ ಕೆಲವು ಅಕ್ಷರಗಳಾಗಳಲ್ಲಾಗಲಿ ಆತ ತನ್ನದೇ ಆದ ಛಾಪು ತೋರಿಸುತ್ತಾನಲ್ಲದೆ ಬೇರೆ ಬೇರೆ ಲಿಪಿಗಾರರಿಗಿಂತ ಭಿನ್ನವಾಗಿ ಕಾಣುತ್ತಾನೆ. ಆದರೆ ಸಾಮಾನ್ಯವಾಗಿ ಯಾವುದೇ ಲಿಪಿಗಾರನು ಅಜಾಗರೂಕತೆಯಿಂದ ಬರವಣಿಗೆಯನ್ನು ಮಾಡುವುದಿಲ್ಲ. ಅಜಾಗೃತ ಬರಹಗಾರರು ಸರ್ವಕಾಲಕ್ಕೂ ಸಮಸ್ಯೆಯಾಗಿಯೇ ಉಳಿಯುತ್ತಾರೆ. ಆದರೆ ಪವಿತ್ರ ಬೈಬಲ್ ಅಂತಹ ಗ್ರಂಥಗಳ ಹಸ್ತಪ್ರತಿಗಳನ್ನು ಬರೆಯುವಾಗ ಲಿಪಿಗಾರ ಕೇವಲ ತನ್ನ ಶಕ್ತಿಯೊಂದನ್ನೇ ಆತು ಈ ಕೆಲಸಕ್ಕೆ ಕೈ

ಹಾಕುವುದಿಲ್ಲ. ಅವರ ಧಾರ್ಮಿಕ ನಂಬಿಕೆ ನಿರೀಕ್ಷೆಗಳು ಅವನನ್ನು ಗಟ್ಟಿ ಮಾಡಿರುತ್ತವೆ. ಮನಸ್ಸಿನ, ಎಚ್ಚರ, ಹೃದಯವಂತಿಕೆ ಹಾಗು ಅಗಾಧವಾದ ಜ್ಞಾನವನ್ನು ಅವನು ಮೈಗೂಡಿಸಿಕೊಳ್ಳಬೇಕಾಗುತ್ತದೆ. ಇಂತಹ ಒಂದು ಧಾರ್ಮಿಕ ನಂಬಿಕೆ, ಸಿದ್ಧಾಂತಕ್ಕೆ ಸೇರಿದ ಬರಹಗಾರರೆಲ್ಲಾ ಒಂದೇ ಮನೋಶೈಲಿಯ ಬರವಣಿಗೆಯನ್ನು ರೂಪಿಸಿಗೊಂಡಿದ್ದರೆಂಬುದು ಬಹು ಕುತೂಹಲಕಾರಿ ಸಂಗತಿ. ಹಳೆ ಒಡಂಬಡಿಕೆಯ ಎಲ್ಲಾ ಬರಹಗಾರರು ಈ ರೀತಿ ಏಕರೀತಿಯ ಮನೋಶೈಲಿಯನ್ನು ಹೊಂದಿದ್ದರೆಂದು ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ. ಆ ಕಾಲದಲ್ಲಿ ಈ ರೀತಿಯ ಹಸ್ತಪ್ರತಿಗಳನ್ನು ಬೇರೆಯವರಿಂದ ಮಾಡಿಸುವಾಗ ಸಹಜವಾಗಿ ಬಹಳ ಖರ್ಚುವೆಚ್ಚವಾಗುತ್ತಿದ್ದರಿಂದ ಕೇವಲ ಶ್ರೀಮಂತರು, ರಾಜಮಹಾರಾಜರೇ ಇದರ ಪೋಷಕರಾಗಿರುತ್ತಿದ್ದರು. ಹಾಗೆಯೇ ಇವುಗಳು ಒಂದು ತರಹದ ಗೌರವದ ಪ್ರಶ್ನೆಯೂ ಹಾಗು ಈ ಬರವಣಿಗೆಗಳು ಚಿರಕಾಲ ಇರಬೇಕೆಂಬ ಉದ್ದೇಶವೂ ಅಡಕವಾಗಿತ್ತು. ಪರಂಪರಾಗತವಾಗಿ ಒಬ್ಬರ ಬಾಯಿಂದ ಮತ್ತೊಬ್ಬರ ಬಾಯಿಗೆ ಬಂದಿರುವ ಮಾತುಗಳು ತನ್ನ ನಂತರದಲ್ಲಿ ತನ್ನ ಜೊತೆಗೇನೆ ಹೋಗಬಾರದೆಂಬ ಉದ್ದೇಶದಿಂದಲೂ ಅವುಗಳನ್ನು ಲಿಪಿಗಿಳಿಸುವ ಆಕ್ಷಾಂಕ್ಷೆಯತ್ತ ಹಾಗು ಬಹಳ ಕಾಲದವರೆಗೂ ಹಾಳಾಗದೆ ರಕ್ಷಿಸಲು ಬೇಕಾಗುವ ಬರಹ ವಸ್ತುಗಳತ್ತ ಮನುಷ್ಯ ತನ್ನ ಮನಸ್ಸು ಮತ್ತು ಬುದ್ಧಿಯನ್ನು ಹರಿಯಬಿಟ್ಟಿದ್ದ. ಕೈಬರಹದ ಗ್ರಂಥ ರಚನೆಯನ್ನು ಸ್ವತಃ ಲೇಖಕರು ಬರೆದಿರಬಹುದು, ಇಲ್ಲವೇ ಅವನು ಒಕ್ಕಣಿಸಿದಂತೆ ಇನ್ನೊಬ್ಬ ಲಿಪಿಗಾರನು ಬರೆದಿರಬಹುದು. ಅದಲ್ಲದೆ ಆ ಪ್ರತಿಯ ಪ್ರಯೋಜನವನ್ನು ಕಂಡು ಮುಂದೆ ಇತರರು ತಮ್ಮ ತಮ್ಮ ಕೈಬರಹಗಳಲ್ಲಿ ಅದನ್ನು ಪ್ರತಿ ಮಾಡಿರಬಹುದು. ಇಂತಹ ಸಂದರ್ಭಗಳಲ್ಲಿ ಪಠ್ಯ ದೋಷಗಳು ಹಣಕುವುದು ಸಹಜ.

ಹಳೆ ಒಡಂಬಡಿಕೆಯಲ್ಲಿ ಉಪಯೋಗಿಸಿರುವ ಬರವಣಿಗೆ ಕಾಗದಗಳು ಎರಡು ವಿಧ – ೧) ಜಂಬುಕಾಗದ ಅಥವಾ ಪ್ಯಾಪೆರಸ್ (Papyrus) ೨)ಚರ್ಮ ಕಾಗದ (Parchament). ಜಂಬು ಕಾಗದವೆಂದರೆ ಜೊಂಡು ಹುಲ್ಲಿನಿಂದ ಮಾಡಿದ ಕಾಗದ. ಸಿಫಿರಸ್ ಸಪ್ಪೆರಸ್ ಕುಲಕ್ಕೆ ಸೇರಿದ, ತುದಿಗಳಲ್ಲಿ ಚಂಗುಗಳ ಹೂಗೊಂಚಲುಗಳಿರುವ, ಕಡು ಹಸಿರು ಕಾಂಡಗಳ್ಳುಳ್ಳ ಜೊಂಡು ಜಾತಿಯ ಜಲಸಸ್ಯವಿದು. ಈ ಜೊಂಡುಗಳನ್ನು ತುಂಡು ತುಂಡು ಮಾಡಿ ಅದನ್ನು ಅಗಲಗಲವಾಗಿ ಜಡಿದು ಬಡಿದು ಅವುಗಳನ್ನು ಅಗಲವಾದ ಹಾಳೆಗಳನ್ನಾಗಿ ಮಾಡುತ್ತಿದ್ದರು. ಇದೇ ಆಗಿನ ಕಾಗದ. ಇದರ ಮೇಲೆ ಅಕ್ಷರಗಲನ್ನು ಕೊರೆದು ದಸ್ತೈವಜು ಪ್ರತಿಗಳನ್ನಿಡುತ್ತಿದ್ದರು. ಈ ಲಿಪಿಗೆ

'ಜಂಬುಲೇಖನಿ' (Papyrography) ಎಂದು ಹೆಸರು. ಈಜಿಪ್ಷಿಯನ್‌ರು ಪಪ್ಪರಸ್ ಗಿಡದ ಜೊಂಡು ಕಾಗದದ ಮೇಲೆ ಹಸ್ತಪ್ರತಿಯನ್ನು ಬರೆಯುತ್ತಿದ್ದರು. ಇದರ ಅಧ್ಯಯನವೇ "ಜಂಬುಪತ್ರಶಾಸ್ತ್ರ" (Papyrology)

ಮತ್ತೊಂದು ಬಹು ಮುಖ್ಯ ಲೇಖನ ಸಾಮಗ್ರಿ ಹದ ಮಾಡಿರುವ ಚರ್ಮ, ಮುಖ್ಯವಾಗಿ ಕುರಿ ಆಡುಗಳ ಚರ್ಮ. ಇದೇ ಚರ್ಮ ಕಾಗದ (Parchament) ಅಥವಾ ತೊಗಲು ಹಾಳೆ. ಹಳೆ ಒಡಂಬಡಿಕೆಯ ಬಹಳಷ್ಟು ಬರಹಗಳು ಈ ಚರ್ಮಕಾಗದದ ಮೇಲೆಯೆ ಇವೆ. ಶಿಲೆಯ ಮೇಲೆ ಇದ್ದ ಬರಹವೆಂದರೆ ಬಹುಶಃ 'ದಶಾಜ್ಞೆ' (Ten Commandments) ಒಂದೆ. ಉಳಿದ ಹೆಚ್ಚಿನವುಗಳೆಲ್ಲಾ ಜಂಬುಕಾಗದ ಹಾಗು ಚರ್ಮಕಾಗದದ ಮೇಲಿನ ಬರಹ. ಇವಲ್ಲದೆ ಗಟ್ಟಿಮಣ್ಣು, ಮೇಣ, ಮರ, ಇತ್ಯಾದಿ. ಇಂತಹ ಮೂಲ ಪ್ರತಿಗಳನ್ನು ಬರೆಯುವುದು, ಅಧ್ಯಯನ ಮಾಡುವುದು ಹಾಗು ಅನುವಾದಿಸುವುದು ಸುಲಭವೇನಲ್ಲ. ಇದಕ್ಕೆ ರಕ್ತಮಾಂಸ ಬೆವರಿನ ಸಂಗಡ ಮಾನಸಿಕ ಶಕ್ತಿಯನ್ನೇ ಸುರಿಯಬೇಕಾಗಿತ್ತು. ಜಂಬುಕಾಗದದ ಪ್ರತಿಗಳಿಗಿಂತ ಚರ್ಮಕಾಗದದ ಮೇಲೆ ಬಿದಿರುವ ಸಾಮಾನ್ಯವಾದ ಚರ್ಮ ಕಾಗದದ ಮೇಲೆ ಬರೆದಿರುವ ಎಲ್ಲಾ ಧರ್ಮಶಾಸ್ತ್ರಗಳು ಈಗ ಅಧ್ಯಯನಕ್ಕೆ ಲಭ್ಯವಿದೆ. ಆದರೆ ಜಂಬುಕಾಗದ ಪ್ರತಿಗಳು ಬಹಳಷ್ಟು ದೊರೆತಿದ್ದರೂ ಅವು ಕ್ಷೀಣವಾಗುತ್ತಿವೆ. ಇಂತಹ ಸಮಸ್ಯೆಗಳು ಭಾಷಾ ಸಂಸ್ಕರಣ, ಅನುವಾದಗಳ ಅರ್ಥವನ್ನು ಇನ್ನೂ ಖಾತ್ರಿ ಮಾಡುವಲ್ಲಿ ತೊಂದರೆಗಳನ್ನು ಒಡ್ಡುತ್ತವೆ.

**೩.೭: ಬೈಬಲಿನ ಅರ್ಥಕಲ್ಪನೆ ಮತ್ತು ಆಶಯ:**

'ಜ್ಯೂಪಿಟರ್' ಗ್ರೀಕ್ ದೇವರುಗಳ ಅರಸ ಅವನ ದೂತ ಹೆರ್ಮೆಸ್ ತನ್ನ ಅರಸನ ಸಂದೇಶಗಳನ್ನು ಜನರಿಗೆ ತಿಳಿಯಪಡಿಸುತ್ತಿದ್ದನಂತೆ ಅರ್ಥ ವಿವರಣೆಯ ಮೂಲ ಇಲ್ಲಿಂದಲೇ ಪ್ರಾರಂಭವಾಯಿತೆಂದು ಹೇಳುತ್ತಾರೆ. ಇದೇ ರೀತಿಯಲ್ಲಿ ಬೈಬಲಿನ ವಾಕ್ಯಾರ್ಥಗಳನ್ನು ವಿವರಿಸುವುದಕ್ಕಾಗಿ 'ಬೈಬಲ್ ಅರ್ಥ ವಿವರಣ ಶಾಸ್ತ್ರ' ಹುಟ್ಟಿಕೊಂಡಿತು. ಮುಂದೆ ಚರ್ಚಿನ ಅನೇಕ ಧಾರ್ಮಿಕ ವಾದವಿವಾದಗಳಲ್ಲಿ ಈ ಶಾಸ್ತ್ರ ಬಹು ಮುಖ್ಯ ಪಾತ್ರವನ್ನು ವಹಿಸಿತು. ಒಂದು ಗ್ರಂಥದ ವಾಕ್ಯಗಳನ್ನು ಅರ್ಥೈಸುವಾಗ ಅದರ ಮೂಲಶಯವನ್ನು ಗ್ರಹಿಸಿ ಮುಂದುವರಿಯಬೇಕಾಗುತ್ತದೆ. ಗ್ರಂಥದ ತಳಸ್ತರ ಜ್ಞಾನಕ್ಕೆ ಗ್ರಂಥಕರ್ತನ ಪರಿಸರ, ಹಿನ್ನಲೆ, ಬದುಕಿನ ಕಾಲಮಾನ, ಸಾಹಿತ್ಯ ಸಂಸ್ಕೃತಿಗಳ ಸಮಕಾಲಿನ ಸ್ಥಿತಿಗತಿ ಹಾಗು ಆ ಕಾಲದ ಚಿಂತನಾ ಶೈಲಿಗಳು

ಬಹುಮುಖ್ಯವಾಗುತ್ತದೆ. ಧಾರ್ಮಿಕ ಅನುಷ್ಠಾನದ ಹಾಗೆ ಬೈಬಲನ್ನು ಓದುವುದು ಕೇವಲ ಸಾಮಾನ್ಯವಾದ ರೂಢಿಯ ಕ್ರಮ.

ಬೈಬಲಿನ ಆಳವಾದ ಅಧ್ಯಯನ ಮಾಡಲು, ವಿಶ್ಲೇಷಣೆ, ವ್ಯಾಖ್ಯಾನ ಮಾಡಲು, ಗ್ರಂಥದ ಹೊಳವುಗಳನ್ನು ಪಡೆಯಲು ಒಂದು ವಿಶಿಷ್ಟ ಮನೋಸ್ಥಿತಿಯೇಬೇಕು. ಇದರ ಭಾಷಾಂತರವಂತೂ ಒಂದು ತಪಸ್ಸೆ ಸರಿ. ಇಲ್ಲಿಯ ಭಾಷಾಂತರಗಾರನಿಗೆ ಇದೊಂದು ದೇವರ ವಾಕ್ಯಗಳ ಗ್ರಂಥವೆನ್ನುವ ಪ್ರಜ್ಞೆ, ಯುಕ್ತಾಯುಕ್ತ ಪರಿಜ್ಞಾನ, ಪರಸ್ಪರ ಭಾಷೆಗಳ ಪರಿಪೂರ್ಣ ಪ್ರಜ್ಞೆ ಮೂಲಭಾಷೆಗಳ ಬಗೆಗಿನ ಖಚಿತ ಅರಿವು ಇರಬೇಕು. ಸ್ಪಷ್ಟ ಕಲ್ಪನೆ ನಂಬಿಕೆ ಮತ್ತು ವಾಸ್ತವದ ಮಧ್ಯೆಯಿರುವ ಸಂಬಂಧ ಮತ್ತು ವ್ಯತ್ಯಾಸ, ಟೀಕೆ ಟಿಪ್ಪಣಿಗಳನ್ನು ಸ್ವೀಕರಿಸಲು ಬೇಕಾದ ಸಮಚಿತ್ತ ಬೆಳಕಿನ ತಿಳುವಳಿಕೆ, ಬದ್ಧತೆಯ ಬದುಕು–ಇವೆಲ್ಲವೂ ತೀರಾ ಅಪೇಕ್ಷಣೀಯ.

**೩.೮: ಅನನ್ಯ ಅನುವಾದಕ ಜೆರೋಮ್:**

ಸುಮಾರು ೨–೩ ಶತಮಾನಗಳ ಗ್ರೀಕ್ ಭಾಷೆಯೇ ಕ್ರೈಸ್ತ ಧರ್ಮದ ಪ್ರಮುಖ ಭಾಷೆಯಾಗಿ ಉಳಿದರೂ ರೋಮ್ ಸಾಮ್ರಾಜ್ಯದ ಬಲವಾದ ಆಕ್ರಮಣ ಹಾಗು ಆಡಳಿತದಿಂದ ಲ್ಯಾಟಿನ್ ಭಾಷೆಯೇ ಪ್ರಮುಖ ಭಾಷೆಯಾಗಿ ಬೆಳೆಯತೊಡಗಿತು. ಲ್ಯಾಟಿನ್‌ಗೆ ರಾಜಾಶ್ರಯವಿದ್ದುದರಿಂದ ಸಹಜವಾಗಿ ಬೈಬಲನ್ನು ಆ ಭಾಷೆಗೆ ಅನುವಾದಿಸಬೇಕಾಯಿತು. ಪ್ರಾರಂಭದಲ್ಲಿ ಲ್ಯಾಟೀನ್ ಭಾಷಾಂತರವನ್ನು ಗ್ರೀಕ್‌ನ "ಎಪ್ಪತ್ತು ಪಂಡಿತರ ಬೈಬಲ್" ಪ್ರಕಾರ ಅನುವಾದಿಸಿದ ನಂತರ ಅವು ಆಫ್ರಿಕಾ ಖಂಡಕ್ಕೆ ಪ್ರವೇಶ ಮಾಡಿದವು. ನಂತರದ ವರ್ಷಗಳಲ್ಲಿ ಬೈಬಲ್‌ನಿಂದ ಆಫ್ರಿಕಾದ ಭಾಷಾ ಪದ ಪ್ರಯೋಗಗಳನ್ನು ತೆಗೆದು ಹಾಕಲು ಅನೇಕ ಪಾಠಾಂತರಗಳು ಬಂದವು. ಈ ದಿಸೆಯಲ್ಲಿ ೩ನೇ ಶತಮಾನದ ಶ್ರೇಷ್ಠ ವಿದ್ವಾಂಸ ಜೆರೋಮ್‌ನ ಭಾಷಾಂತರ ಕೆಲಸ ಬಹಳ ಮುಖ್ಯವಾದದ್ದು. ಈ ಆವೃತ್ತಿಯಲ್ಲಿ ಕಂಡು ಬಂದಿರುವ ಲೋಪದೋಷಗಳನ್ನು ಸರಿಪಡಿಸಲು ಜೆರೋಮ್ ತಾನೆ ರೋಮಿನ ಡಮಾಸ್ಕಸ್ ಬಿಷಪ್ಪ್ ಅನುಮತಿ ಪಡೆದು ಹೀಬ್ರೂ ಭಾಷೆಯ ಮೂಲ ಪ್ರತಿಯಿಂದಲೇ ಅನುವಾದ ಮಾಡಿದನು. ಈ ಅನುವಾದವನ್ನು 'ವಲ್ಗೇಟ್" (Valgate) ಎಂದು ಕರೆಯುತ್ತಾರೆ. ಈ ವಲ್ಗೇಟ್ ಬೈಬಲ್ ರೋಮ್ ಸಾಮ್ರಾಜ್ಯದೆಲ್ಲೆಡೆ ಜನಪ್ರಿಯವಾಗಿ ಅದು ಎಲ್ಲರ ಗ್ರಂಥವಾಯಿತು. ಇದೊಂದು ಮಹತ್ತರವಾದ ಕೆಲಸ. ಈ ಕಾರ್ಯಸಾಧನೆಗೆ ಜೆರೋಮ್ ತೆಗೆದುಕೊಂಡಿರುವ ಕಾಲಾವಧಿ ಇಪ್ಪತ್ತನಾಲ್ಕು ವರ್ಷಗಳು. ವ್ಯಕ್ತಿಯೊಬ್ಬನು ತನ್ನ ಬದುಕಿನಲ್ಲಿ ಒಂದು ಗ್ರಂಥಕ್ಕಾಗಿ ಇಷ್ಟೊಂದು

ದೀರ್ಘಕಾಲ ತನ್ನ ಜೀವವನ್ನು ತೇದಿರುವುದು ಇತಿಹಾಸದಲ್ಲಿ ಸಣ್ಣ ಸಂಗತಿಯಲ್ಲ. ಕ್ರಿ.ಶ. ೪೦೫ ರಲ್ಲಿ ಜೆರೋಮ್ ಈ ಕೆಲಸವನ್ನು ಮುಗಿಸಿದಾಗ ಅನನ್ಯವಾದ ತೃಪ್ತಿ ಆತನ ಕಣ್ಣಂಚಿನಲ್ಲಿತ್ತು. ಇಂದಿಗೂ ಜಗತ್ತಿನೆಲ್ಲೆಡೆಯಿರುವ ರೋಮನ್ ಕ್ಯಾಥೋಲಿಕ್ ಸಭೆಗಳಲ್ಲಿ ಈ ಅನುವಾದವನ್ನೇ ಅಧಿಕೃತ ಅನುವಾದವೆಂದು ಅಂಗೀಕರಿಸಿ ಉಪಯೋಗಿಸುತ್ತಿದ್ದಾರೆ. ಸುಮಾರು ೮೦೦೦ ವಲ್ಗೇಟ್ ಪ್ರತಿಗಳು ಸಂಗ್ರಹದಲ್ಲಿರುವುದನ್ನು ನೋಡಿದರೆ ಆ ಆವೃತ್ತಿಯ ಮರುಪ್ರತಿಗಳು ಕಾಲದಿಂದ ಕಾಲಕ್ಕೆ ಆಗುತ್ತಲೇ ಇತ್ತೆಂದು ತಿಳಿಯುತ್ತದೆ. ಕ್ರಿಸ್ತನ ಕಾಲದ ಆಡು ಭಾಷೆ ಆರಾಮಿಕ್. ಇದಕ್ಕೆ ಹತ್ತಿರದ ಭಾಷೆಯೆಂದರೆ ಸಿರಿಯಾಕ್ ಭಾಷೆ. ಈ ಸಿರಿಯಾಕ್ ಭಾಷೆಯೇ ಪಾಲೆಸ್ತೈನ್‌ನ ಸುತ್ತಮುತ್ತಲಿನಲ್ಲಿ ತುಂಬ ಪ್ರಚಲಿತವಾಗಿತ್ತು. ಅಲ್ಲಿ ಆಗ ಮತಾಂತರ ಹೊಂದಿದ್ದ ಕ್ರೈಸ್ತರಿಗೆ ಹಾಗು ಕ್ರೈಸ್ತ ಸಭೆಗಳಿಗೆ ತಮ್ಮ ಮಾತೃಭಾಷೆಯಲ್ಲಿಯೇ ಧರ್ಮಶಾಸ್ತ್ರವನ್ನು ಓದುವ ಹಂಬಲ ಸಹಜ. ಸುಮಾರು ಎರಡನೆ ಶತಮಾನದ ಕೊನೆಯ ಭಾಗದಲ್ಲಿ ಹಳೆ ಸಿರಿಯಾಕ್ ಪಾಠಾಂತರವನ್ನು (Old Syriac Version ) ಸಿದ್ಧ ಪಡಿಸಿದರು.

೧೮೪೨ ಹಾಗು ೧೮೯೨ರಲ್ಲಿ ಈಜಿಪ್ಟ್‌ನಲ್ಲಿ ನಡೆಇದ ಸಂಶೋಧನೆಗಳಲ್ಲಿ ಹಳೆ ಸಿರಿಯಾಕ್ ವರ್ಷನ್‌ನಿನ ಎರಡು ಸುವಾರ್ತ ಹಸ್ತಪ್ರತಿಗಳು ದೊರೆತಿವೆ. ಇವೆರಡು ಕೂಡ ಕ್ರಿ.ಶ. ೪ ಮತ್ತು ೫ನೇ ಶತಮಾನದವು. ಅತಿ ಪ್ರಮುಖವಾದ ಸಿರಿಯಾಕ್ ಪಾಠಾಂತರವನ್ನು "ಪಿಶಿಟ್ಟಾ"ವೆನ್ನುವರು. 'ಪಿಶಿಟ್ಟಾ'ವೆಂದರೆ ಸರಳ ಎಂದರ್ಥ. ಸಿರಿಯಾಕ್ ಕ್ರೈಸ್ತ ಸಭೆಗಳು ಉದಯವಾಗುವ ಸಮಯದಲ್ಲಿ ಹೊಸ ಒಡಂಬಡಿಕೆಯ ಅನೇಕ ಭಾಷಾಂತರಗಳನ್ನು ಮಾಡಿದ್ದು ಆ ಕಾಲದಲ್ಲಿ ಅವು ಬಹು ಉಪಯುಕ್ತವಾಗಿದ್ದವು. ಮುಂದೆ ಈ ಸಿರಿಯಾಕ್ ಅನುವಾದಗಳೆ ಭಾರತವು ಸೇರಿದಂತೆ ಏಶಿಯಾದ ಅನೇಕ ರಾಷ್ಟ್ರಗಳಲ್ಲಿ ಪ್ರಸಾರಕ್ಕೆ ಬಂದವು. 'ಪಿಶಿಟ್ಟಾ' ಗ್ರಂಥವು ಪೇತ್ರ ೨, ಯೋಹಾನ ೨ ಮತ್ತು ೩ ಹಾಗು ಪ್ರಕಟಣೆ ಪುಸ್ತಕ ಹೊರತು ಮತ್ತೆಲ್ಲಾ ಭಾಗಗಳನ್ನು ಹೊಂದಿದೆ. ಈ ದೃಷ್ಟಿಯಿಂದ ಹಳೆ ಒಡಂಬಡಿಕೆ ಭಾಷಾಂತರವು ನೇರವಾಗಿ ಹೀಬ್ರೂ ಭಾಷೆಯಿಂದಲೂ ಹಾಗು ಹೊಸ ಒಡಂಬಡಿಕೆಯ ಗ್ರೀಕ್ ಹಸ್ತಪ್ರತಿಗಳ ಮೂಲದಿಂದಲೂ ಬಂದವುಗಳೆಂಬುದಕ್ಕೆ ಮತ್ಯಾವ ಪುರಾವೆಗಳು ಬೇಡ.

ಮತ್ತುಳಿದ ಪ್ರಾಚೀನ ಭಾಷಾಂತರಗಳು ನಾಲ್ಕನೆ ಶತಮಾನದ ಮಧ್ಯಭಾಗದಲ್ಲಿ ಈಥಿಯೋಪಿಕ್, ಈಜಿಪ್ಟಿಯನ್ ಕಾಸ್ಟಿಕ್, ಗಾಥಿಕ್, ಆಸ್ಮಿನಿಯನ್ ಹಾಗು ಒಂಬತ್ತನೆ

ಶತಮಾನದಲ್ಲಿ ಸೆಲ್ವಾನಿಕ್ ಪಾಠಾಂತರಗಳು ಹೊರಬಂದವು. ೧೯೭೮ರ ಹೊತ್ತಿಗೆ ಬೈಬಲ್ ಸುಮಾರು ೧೫೫೦ ಭಾಷೆಗಳಲ್ಲಿ ಪ್ರಕಟಣೆಗೊಂಡು ಜಗತ್ತಿನ ಉದ್ದಗಲವನ್ನು ಕಂಡಿತು.

ಬೈಬಲಿನ ವಿವಿಧ ಪಾಠಾಂತರ, ಭಾಷಾಂತರಗಳಿಗೆ ಮೂಲ ಹೀಬ್ರೂ ಹಾಗು ಗ್ರೀಕ್ ಭಾಷೆಗಳೆಂಬುದು ಈಗಾಗಲೇ ಸ್ಥಾಪಿತವಾದ ಸತ್ಯ. ಆಗಿನ ಕಾಲದ ಭಾಷಾಂತರಗಾರರೆಲಾ ತಮ್ಮ ಕಾಲದಲ್ಲಿ ದೊರಕಿದ ಹಸ್ತಪ್ರತಿಗಳನ್ನು ಆಧಾರವಾಗಿಟ್ಟುಕೊಂಡು ತಮ್ಮ ಕಾಯಕವನ್ನು ಕೈಗೊಂಡರು. ಕಾಲಕ್ರಮೇಣ ಹೀಬ್ರೂ ಭಾಷೆ ತನ್ನ ಶಕ್ತಿಯನ್ನು ಕಳಕಂಡು 'ಮೃತಭಾಷೆ'ಯಾದಂತೆ ಅವೆಲ್ಲವೂ ಕ್ರಮೇಣ ಗ್ರೀಕ್ ಭಾಷೆಯ ಪರಿಧಿಯೊಳಗೆ ಬಂದು ಕ್ರಿಸ್ತನ ಕಾಲದ ಹೊತ್ತಿಗೆ ಗ್ರೀಕ್ ಭಾಷೆ ತನ್ನೆಲ್ಲಾ ರಕ್ತಮಾಂಸವನ್ನು ಹೊಂದಿಕೊಂಡು ಒಂದು ಶ್ರೀಮಂತ, ಸಾರ್ವತ್ರಿಕ ಭಾಷೆಯಾಯಿತು. ಭಾಷೆಯೊಂದು ಮೃತ ಭಾಷೆಗೆ ಸೇರುವುದೆಂದರೆ ಅಂದೊಂದು ಸಾಂಸ್ಕೃತಿಕ ದುರಂತ. ಇದಕ್ಕೆ ಭಾಷಾ ಇತಿಹಾಸದಲ್ಲಿ ಅನೇಕ ಉದಾಹರಣೆಗಳಿವೆ. ಕ್ರಿ.ಶ. ಮೊದಲ ಶತಮಾನದ ಹೊತ್ತಿಗೆ ಎಲ್ಲಾ ಬೈಬಲ್ ಭಾಷಾಂತರಗಳು ನೇರವಾಗಿ ಗ್ರೀಕ್ ಮೂಲದಿಂದಲೇ ಮೂಡಿ ಬಂದವು. ಗ್ರೀಕ್ ಭಾಷೆಯೇ ಹೊಸ ಒಡಂಬಡಿಕೆಯ ಮೂಲ ಭಾಷೆಯಾಗಿದ್ದು ಕ್ರಮೇನ ರೋಮನ್ನರ ಆಡಳಿತ ಪ್ರಬಲವಾದಂತೆ ಲ್ಯಾಟಿನ್ ಭಾಷೆ ತನ್ನ ಅಧಿಕೃತ ಪ್ರಭುತ್ವವನ್ನು ಸಾಧಿಸಿ ಎಲ್ಲಾ ಕ್ರೈಸ್ತ ದೇವಾಲಯಗಳಲ್ಲಿ ಧಾರ್ಮಿಕ ಭಾಷೆಯಾಯಿತು. ಭಾಷೆಯೊಂದಕ್ಕೆ ಆಡಳಿತದ ಅಧಿಕೃತ ಮೊಹರು ಬಿದ್ದಾಗ ಅದು ಹೊಸ ಶಕ್ತಿಯಿಂದ ಎದ್ದು ನಿಲ್ಲುವುದು ಸಹಜ. ಮುಂದೆ ೨೦ನೇ ಶತಮಾನದವರೆಗೂ ಎಲ್ಲಾ ರೋಮನ್ ಕ್ಯಾಥೋಲಿಕ್ ಸಭೆಗಳ ದೇವಾರಾಧನೆಗಳಲ್ಲಿ, ಆರಾಧನೆಯ ಕ್ರಮಗಳಲ್ಲಿ, ಪ್ರಬಲವಾದ ಧಾರ್ಮಿಕ ಛಾಪು ಇತ್ತು. ಇವುಗಳಿಂದಾಗಿ ಜಗತ್ತಿನ ಕ್ರೈಸ್ತ ವಲಯದಲ್ಲಿ ಒಂದು ಪ್ರಬಲವಾದ ಧಾರ್ಮಿಕ ಭಾಷೆಯಾಯಿತು.

**೩.೯ ರಿನೇಸಾನ್ಸ್ ಕಾಲ:**

ಜ್ಞಾನದ ಪುನರುಜ್ಜೀವ ಯುಗ ೧೪ ರಿಂದ ೧೬ನೇ ಶತಮಾನಗಳವರೆಗೂ ಇದ್ದಕಾಲ. ಮಹಾ ಸಂಕ್ರಮಣ ಕಾಲ. ಭಾಷೆ, ಸಾಹಿತ್ಯ, ಕಲೆ ಸಂಸ್ಕೃತಿಗಳ ಮೇಲೆ ಈ ಜ್ಞಾನದ ಪುನರ್ ಜೀವನ ಬೀರಿದ ಪ್ರಭಾವ ಅಷ್ಟಿಷ್ಟಲ್ಲ. ಹೊಸ ಹೊಸ ವೈಜ್ಞಾನಿಕ ಆವಿಷ್ಕಾರಗಳು ಬಂದು ಜಗತ್ತಿನ ಯೋಚನಾ ಲಹರಿಯನ್ನೇ ಬದಲಾಯಿಸಿದ ಕಾಲವದು. ನಿಂತ ನೀರಿನಂತಾಗಿದ್ದ ಸಾಹಿತ್ಯ, ಕಲೆ, ವಿಜ್ಞಾನಗಳೆಲ್ಲವೂ ಹರಿಯಲಾರಂಭಿಸಿ ಹೊಸಹೊಸ ಕ್ಷೇತ್ರಗಳನ್ನು ಆವರಿಸಿಕೊಂಡವು. ಪ್ರಾಚೀನ ಭಾಷೆಗಳಿಗಿದ್ದ ಬಿಗಿಯಾದ ಒಂದು ಚೌಕಟ್ಟನ್ನು ಸಡಿಲಿಸಿ ಅವುಗಳ ಕಿಟಕಿ ಬಾಗಿಲುಗಳನ್ನು ತೆರೆದು

ಹೊಸಗಾಳಿ ಬೀಸುವಂತೆ ಮಾಡಿ ಅವುಗಳನ್ನು ಮುಕ್ತಗೊಳಿಸಿದರು. ಧಾರ್ಮಿಕ ಕ್ಷೇತ್ರದೊಳಗೆ ಹೊಸ ನೀರು ಹರಿಯಲಾರಂಭಿಸಿತು. ಪಾಚಿಗಟ್ಟಿದ ಧಾರ್ಮಿಕ ಕೊಳಗಳು ತಿಳಿನೀರಿನಿಂದ ತುಂಬಿದವು. ಮುಚ್ಚಿಟ್ಟಿದ್ದ ಜ್ಞಾನವನ್ನು ಬಿಚ್ಚಿಡಬೇಕಾಯಿತು. ಜ್ಞಾನ ಸಂಪಾದನೆ ಕೇವಲ ಕೆಲವರಿಗೆ ಲಭ್ಯವಾಗುವ ಪರಿಸ್ಥಿಯಿಯ ವಿರುದ್ಧ ಬಂಡಾಯ ಹಾಗು ಹೋರಾಟದ ಧ್ವನಿಗಳೆದ್ದವು. ಪ್ರತಿಯೊಂದಕ್ಕೂ ಗ್ರೀಕ್ ಭಾಷೆ ಸಂಸ್ಕೃತಿಯನ್ನೇ ಅರಿತುಕೊಳ್ಳುವ ಕಾಲ ಹೋಗಲಾರಂಭಿಸಿತು. ಅವರವರ ಭಾಷೆಯಲ್ಲಿಯೇ ದೇವರನ್ನು ಆರಾಧಿಸಬೇಕೆನ್ನುವ, ಅವರವರ ಭಾಷೆಯಲ್ಲಿಯೇ ಬೈಬಲನ್ನು ಓದಬೇಕೆನ್ನುವ ತೃಷೆ ಹೆಚ್ಚಾಗತೊಡಗಿತು. ಇದಕ್ಕಾಗಿಯೇ ಭಾಷಾ ಕ್ಷೇತ್ರದಲ್ಲಿ ಹೊಸ ಹೊಸ ಅಧ್ಯಯನ ಪ್ರಯತ್ನಗಳು, ಪ್ರಯೋಗಗಳು, ಆವಿಷ್ಕಾರಗಳು ಆಗತೊಡಗಿದವು. ಬೈಬಲ್ ಭಾಷಾಂತರಗಳ ಸುಗ್ಗಿಯೇ ಪ್ರಾರಂಭವಾದ ಹಾಗೆ ಆಯಿತು.. ಭಾಷಾಂತರಗಾರರು ಹಾಗೂ ವಿದ್ವಾಂಸರು ಕಡ್ಡಾಯವಾಗಿದ್ದ ಲ್ಯಾಟಿನ್ ಭಾಷೆಯನ್ನು ಕೈಬಿಟ್ಟು ಬೈಬಲಿನ ಮೂಲ ಭಾಷೆಗಳಿಗೆ ಲಗ್ಗೆ ಹಾಕತೊಡಗಿದರು. ಇದೊಂದು ನವೋದಯದ ಕಾಲ. ಧರ್ಮ, ಭಾಷೆ, ಸಾಹಿತ್ಯ ಸಂಸ್ಕೃತಿ ವಿಜ್ಞಾನಗಳೆಲ್ಲವೂ ಹೊಸಹೊಸ ಬೆಳಕನ್ನು ಕಂಡುಕೊಂಡ ಕಾಲ, ವೈಚಾರಿಕತೆಯ ಹೊಂಗನಸು ಮೂಡಿದಂತಹ ಕಾಲ ಅದಾಗಿತ್ತು. ಬೈಬಲ್ ಭಾಷಾಂತರದ ಇತಿಹಾಸದ ದೃಷ್ಟಿಯಲ್ಲಿಯಂತೂ ಇದೊಂದು ಪರ್ವಕಾಲ.

ಸ್ಪೇನಿನ ಟೊಲೆಡೋಡ್ ಕಾರ್ಡಿನಲ್ ಇಮಿನೀಸ್ ಗ್ರೀಕ್ ಸಂಪುಟದ ಬೈಬಲನ್ನು ಹೊರತರುವಲ್ಲಿ ಬಹುಮುಖ್ಯ ಪಾತ್ರವನ್ನು ವಹಿಸಿದನು. ಇದೊಂದು ಬಹು ಮಹತ್ವದ ಸಂಪುಟವಾಗಿಯೇ ಉಳಿಯಿತು. ಈ ಸಂಪುಟದ ಹಿಂದಿದ್ದ ಕಲ್ಪನೆಯೇ ಒಂದು ರೀತಿಯಲ್ಲಿ ವಿಶೇಷ. ಒಂದೇ ಗ್ರಂಥ, ಒಂದು ಮಗ್ಗುಲಲ್ಲಿ ಮತ್ತೊಂದು ಪ್ರತ್ಯೇಕ ಸಮಾನಾಂತರ ಕಾಲಂಗಳಲ್ಲಿ ಹೀಬ್ರೂ ಲ್ಯಾಟಿನ್ ಹಾಗು ಗ್ರೀಕ್ ಭಾಷೆಗಳ ಅನುವಾದಗಳು ಒಂದರ ಪಕ್ಕದಲ್ಲಿ ಒಂದು ಹೊರಬಂದವು. ಪುಸ್ತಕದ ಹೆಸರು, ಅಧ್ಯಾಯ, ವಚನ ಸಂಖ್ಯೆ ಈ ಮೂರು ಒಂದೇ ರೀತಿಯಲ್ಲಿದ್ದವು. ಇದೊಂದು ಬಹುಭಾಷಾ ಬೈಬಲ್ ಗ್ರಂಥವಾದರಿಂದ ಇದನ್ನು "ಪಾಲಿಗ್ಲಾಟ್" ಎಂದು ಕರೆಯುತ್ತಿದ್ಧರು. ಬಹಳ ಮುಖ್ಯವಾಗಿ ಈ ಪ್ರಯತ್ನಕ್ಕೆ ಪೋಪರ ಅನುಮತಿ ಸಹ ಇತ್ತು. ಆದರೆ ಈ ಕಾರ್ಡಿನಲ್ ಪಾಠಾಂತರದ ಬೈಬಲ್ ೧೫೨೨ರವರೆಗೂ ಪ್ರಕಟಣೆಯಾಗಲೇ ಇಲ್ಲ. ನಂತರದ ವರ್ಷಗಳಲ್ಲಿ ಈ ಆವೃತ್ತಿ ಹೊರಬಂದಾಗ ಇದೇ ಪ್ರಥಮವಾಗಿ ಮುದ್ರಣ ಕಂಡ ಗ್ರೀಕ್ ಭಾಷೆಯ ಹೊಸ

ಒಡಂಬಡಿಕೆ ಆಯಿತು. ಇದೇನೂ ಪ್ರಪ್ರಥಮ ಪ್ರಕಟಣೆಯಾಗದಿದ್ದರೂ ಓದುಗರಿಗೆಲ್ಲರಿಗೂ ಲಭ್ಯವಾದ ಕೃತಿಯಾಯಿತು.

**೩.೧೦ ನವೋದಯ ಕಾಲ:**

ಜ್ಞಾನದ ಪುನರುಜ್ಜೀವ ಯುಗ (Renaissance) ಕಾಲದ ಅಭೂತಪೂರ್ವ ಸಾಧ್ಯತೆಗಳು, ಹೊಸಹೊಸ ಆವಿಷ್ಕಾರಗಳು ಮುಖ್ಯವಾಗಿ ಮುದ್ರಣಯಂತ್ರದ ತಯಾರಿಕೆಗಳು ಅಕ್ಷರ ಲೋಕದಲ್ಲಿ ಅದ್ಭುತ ಕ್ರಾಂತಿಯನ್ನೇ ಮಾಡಿದವು. ಇದರಿಂದ ಬೈಬಲ್ ಪ್ರಕಟಣೆಗಳಿಗೆ ಸಾಕಷ್ಟು ಅನುಕೂಲ ಮತ್ತು ಬೆಂಬಲ ಸಿಕ್ಕಿತು. ಈ ಕಾಲಘಟ್ಟ ಬೈಬಲ್ ಭಾಷಾಂತರಗಳ ಇತಿಹಾಸದಲ್ಲಿಯೇ ದೊಡ್ಡ ಮೈಲಿಗಲ್ಲು. ಗ್ರಂಥ ಉತ್ಪಾದನಾ ಕ್ಷೇತ್ರದ ಉದ್ದಗಲಗಳು ಬಹು ತೀವ್ರವಾಗಿ ವಿಸ್ತಾರಗೊಂಡವು. ಈವರೆಗೆ ಗ್ರಂಥ ನಿರ್ಮಾಣದ ವೃತ್ತಿ ಪ್ರವೃತ್ತಿಗಳು ಕೇವಲ ವಿದ್ವಾಂಸರ ಸೊತ್ತಾಗಿದ್ದು ಈಗ ಹಲವಾರು ಅಲ್ಲಿ ತಮ್ಮ ವ್ಯಾಪಾರಿ ಕನಸುಗಳನ್ನು ಕಾಣತೊಡಗಿದರು. ತೀರಾ ಖಾಸಗಿ ಹಾಗು ಹವ್ಯಾಸಿ ಕ್ಷೇತ್ರವಾಗಿದ್ದ ಅಕ್ಷರ ಲೋಕಕ್ಕೆ ವೃತ್ತಿಪರರು ಪ್ರವೇಶ ಮಾಡತೊಡಗಿದರು. ಒಮ್ಮೆ ಬೈಬಲಿನ ಪಾಂಡಿತ್ಯವೇನೂ ಇಲ್ಲದ ಮುದ್ರಕನೊಬ್ಬ ಎರಾಸ್‌ಮಸ್ ಬಳಿಗೆ ಬಂದು ಲಭ್ಯವಿರುವ ಎಲ್ಲಾ ಹಸ್ತಪ್ರತಿಗಳ ಆದಾರದ ಮೇಲೆ ಗ್ರೀಕ್ ಬೈಬಲನ್ನು ಸಂಪಾದಿಸಿಕೊಡಲು ಕೇಳಿಕೊಂಡನಂತೆ. ಬೈಬಲ್ ಓದುಗರ ದೃಷ್ಟಿಯಿಂದಲೂ ಇದೊಂದು ಪರ್ವಕಾಲ. ಓದುಗರ ಸಂಖ್ಯೆ ದಿನೇ ದಿನೇ ಹೆಚ್ಚಾಗತೊಡಗಿತು. ರಿನೇಸಾನ್ಸ್‌ನ ವಿಚಾರ ಕ್ರಾಂತಿಯಿಂದಾಗಿ ಎಲ್ಲರ ಗಮನ ಬೈಬಲ್ ಓದಿನ ಕಡೆ ಹೋಯಿತು. ಕ್ರೈಸ್ತ ಧಾರ್ಮಿಕ ಗ್ರಂಥಗಳನ್ನು ಪುರೋಹಿತರಲ್ಲದೆ ಉಳಿದವರು ಓದಬಾರದೆನ್ನುವ ಪುರೋಹಿತಶಾಯಿಯ ಧ್ವನಿ ಕರಗುತ್ತಾ ಹೋಯಿತು. ಆ ಕಾಲದ ವೈಚಾರಿಕಾ ಕ್ರಾಂತಿ ಬೈಬಲ್ ಭಾಷಾಂತರ ಕಾರ್ಯಕ್ಕೆ ಅಪಾರವಾದ ಸ್ಫೂರ್ತಿಯನ್ನು ನೀಡಿತು. ಮುದ್ರಣ ಯಂತ್ರಗಳು ಬಂದ ಮೇಲೆ ವಿದ್ವಾಂಸರೆಲ್ಲರೂ ಗ್ರೀಕ್ ಹಸ್ತಪ್ರತಿಗಳ ಕಡೆಗೆ ಧಾವಿಸಿದರೆ ವ್ಯಾಪಾರಸ್ಥರು ವಿದ್ವಾಂಸರ ಕಡೆಗೆ ಓಡಿದರು. ಮುದ್ರಕರ ವ್ಯಾಪಾರಸ್ಥರ ಹಾಗು ಕೈಗಾರಿಕೋದ್ಯಮಿಗಳ ಬೇಡಿಕೆಗಳಿಗನುಸಾರವಾಗಿ ಪ್ರಕಟಣೆಗಳು ಹೆಚ್ಚಾಗತೊಡಗಿದವು. ಎಲ್ಲೋ ಒಂದೆಡೆ ಕೂತು ಬರೆದು ಮುದ್ರಿಸಿದ ಪುಸ್ತಕ ಜಗತ್ತಿನೆಲ್ಲಡೆ ದೊರೆಯುವಂತಾಯಿತು. ಇದೊಂಡು ಬಹು ದೊಡ್ಡ ಭೌತಿಕ ಕ್ರಾಂತಿ ಮುದ್ರಣ ಕ್ಷೇತ್ರದಲ್ಲಿ ಹೊಸ ಹೊಸ ಆವಿಷ್ಕಾರಗಳು ಬಂದ ಹಾಗೆ ಬೈಬಲ್ ಭಾಷಾಂತರ, ಪ್ರಕಟನೆ ಹಾಗೂ ಪ್ರಸಾರದ ಸ್ವರೂಪವೇ ಬದಲಾಗುತ್ತಾ ಬಂದು ಇಂದು ಬಹುಶ್ರೇಷ್ಠ ಅತ್ಯಾಧುನಿಕ ಮುದ್ರಣ ಕೌಶಲ್ಯದ ಹಿನ್ನೆಲೆಯಲ್ಲಿ ರಚಿಸಲಾದ ಬೈಬಲ್ ಎಲ್ಲರಲ್ಲೂ ಇದೆ.

ಎಲ್ಲೆಡೆಯಲ್ಲಾದ ಮುದ್ರಣ ಕ್ರಾಂತಿ ಇದು ಸಾರ್ವತ್ರಿಕ ಶಿಕ್ಷಣ ಕ್ಷೇತ್ರವನ್ನು ಬಹು ವಿಸ್ತಾರಗೊಳಿಸಿತು.

# ಸಂದರ್ಭ ಸೂಚಿ

**೧. ಹೊಸ ಒಡಂಬಡಿಕೆ**

ಮತ್ತಾಯ : ಪುಟ ೧ ರಿಂದ ೨೪ ಸಂಧಿಗಳು

ಮಾರ್ಕ್ : ಪುಟ ೪೧ ರಿಂದ ೧೬

ಲೂಕ್ : ಪುಟ ೬೬ – ೨೫

ಯೋಹಾನ : ಪುಟ ೧೦೯ – ೨೧

೨. ವಿಲಿಯಂ : ಬೈಬಲ್ ಭಾಷಾಂತರ–ರೂಪಾಂತರ ೧೦–೩೨

# ಅಧ್ಯಾಯ ೪

# ೪. ಬೈಬಲಿನಲ್ಲಿ ಚಿತ್ರಿತವಾದ ಯೇಸುವಿನ ಚಿತ್ರ

**೪.೧ ಬೈಬಲಿನ ಕಥಾವಸ್ತು**

**೪.೨ ಪಾತ್ರ ಚಿತ್ರಣ**

೪.೨.೧ ಯೇಸು

೪.೨.೨ ಪಿಲಾತ

೪.೨.೩ ಯಾಜಕ ವರ್ಗದವರು

೪.೨.೪ ಮಗ್ದಲದ ಮರಿಯ

೪.೩ ತತ್ತ್ವ ದೃಷ್ಟಿ

# ೪. ಬೈಬಲ್‌ನಲ್ಲಿ ಚಿತ್ರಿತವಾದ ಯೇಸುವಿನ ಚಿತ್ರ

## ೩.೧ ಬೈಬಲಿನ ಕಥಾವಸ್ತು:

ಯೇಸುವಿನ ಕಡೆಯ ದಿನದ ನಸುಕು ಯೆಹೋದ್ಯರ ಮನಸ್ಸಾಕ್ಷಿಯ ಹಾಗೆ ಕೋಳಿ ಮೂರನೆ ಬಾರಿ ಕೂಗಿ ಸುಮ್ಮನಾಗಿದೆ. ಯಾಜಕ ವರ್ಗದವರು ಯೇಸುವನ್ನು ಕೊಲ್ಲಲು ಬಯಸಿದ್ದಾರೆ. ಪಸ್ಕ ಹಬ್ಬದಂದು ಶುಚಿಯಿಂದಿರಬೇಕಾದ ಕಾರಣ ತಾವು ಹೊರಗಿದ್ದು ರಾಜಭಟರಿಂದ ಕೈಸರನ ಪ್ರತಿನಿಧಿ ಪಿಲಾತನಲ್ಲಿ ಮನವಿಯನ್ನು ಸಲ್ಲಿಸಿದ್ದಾರೆ. ನ್ಯಾಯ ಪೀಠದಲ್ಲಿ ನಿಲ್ಲಿಸಿದ ಯೇಸುವನ್ನು ಆಗ ಪಿಲಾತನು ನೋಡಿದನು ಗದ್ದುಗೆಯಿಂದ ಎದ್ದು ಬಂದು ಈತನಲ್ಲಿ ಯಾವ ತಪ್ಪಿದೆ? ಏಕೆ ಕರೆತಂದಿರುವಿರಿ ಎಂದು ನೆರೆದ ಜನರ ಗುಂಪನ್ನು ಕೇಳಿದನು. ಆಗ ಯಾಜಕವರ್ಗದವರು ಕೈಸರನಿಗೆ ತೆರಿಗೆಯನ್ನು ಕೊಡಬಾರದೆಂದು ಈತನು ತಿಳಿಸುವನೆಂದೂ, ಯೆಹೋದ್ಯರ ಅರಸನೆಂದು – ತಾನೇ ಹೇಳಿಕೊಳ್ಳುವನೆಂದೂ, ರಾಜದ್ರೋಹಿಯಾಗಿರುವನೆಂದೂ ಕಾರಣಗಳನ್ನು ಕಲ್ಪಿಸುವರು.

ಪಿಲಾತನು ವಿಚಾರಣೆ ನಡೆಸಿದಾಗ ಯೇಸು ನಿರಪರಾಧಿಯೆಂದು ಆತನ ಅರಿವಿಗೆ ಬರುತ್ತದೆ. ಯೆಹೂದ್ಯರ ಅಭಿಮತದಂತೆ ಮರಣದಂಡನೆಯನ್ನು ವಿಧಿಸಲು ಮನಬಾರದೆ ಹೋಗುತ್ತದೆ. ಹಲವು ಬಗೆಯಲ್ಲಿ ಇವನ ಬಿಡುಗಡೆಗಾಗಿ ಪ್ರಯತ್ನಿಸುತ್ತಾನೆ. ಪಾಶವೀವೃತ್ತಿಯ ಯೆಹೂದ್ಯರು ಪಿಲಾತನನ್ನೇ ಹೆದರಿಸಿ, ಯೇಸುವನ್ನು ಗಲ್ಲಿಗೇರಿಸಬೇಕೆಂದೂ, ಆತನ ರಕ್ತ ನಮ್ಮ ಮೇಲೆ, ನಮ್ಮ ಮಕ್ಕಳ ಮೇಲೆ ಇರಲೆಂದು ಸಂತೋಷದಿಂದ ಆರ್ಭಟಿಸುತ್ತಾರೆ. ಯೆಹೂದ್ಯರ ರಕ್ತದಾಹಕ್ಕೆ ನಿರ್ದೋಷಿಯಾದ ಯೇಸುವನ್ನು ಬಲಿಕೊಡುವುದೇ ನಿಶ್ಚಯವೆಂದು ಪಿಲಾತನು ಬಗೆಯಬೇಕಾಗುತ್ತದೆ; ಬೇರೆ ಮಾರ್ಗವಿಲ್ಲದೆ ಮರಣಾಜ್ಞೆಯನ್ನು ಪಿಲಾತ ವಿಧಿಸುತ್ತಾನೆ.

ಬಳಿಕ ರಾಣುವೆಯರು ಯೇಸುವಿಗೆ ಕೆಂಪು ವಸ್ತ್ರವನ್ನು ಹೊದಿಸಿ ಮುಳ್ಳಿನ ಕಿರೀಟವನ್ನು ತೊಡಿಸಿ ಮೂದಲಿಸುತ್ತಾರೆ. ಬಾಸುಳೆ ರಕ್ತ ಬರುವಂತೆ ಹೊಡೆಯುತ್ತಾರೆ. ಸಹನಾಶೀಲನಾದ ಯೇಸುವು ಒಂದು ಮಾತನ್ನು ಆಡದೆ ಪ್ರೇಮದ ಅರುಣೋದಯದಂತೆ ಕಾಣುತ್ತಾನೆ. ವಧ್ಯಸ್ಥಾನಕ್ಕೆ ಕೊಂಡೊಯ್ದ ಸಂದರ್ಭದಲ್ಲಿ ಎದೆ ಬಡಿದುಕೊಂಡು ಗೋಳಾಡುತ್ತಾ ಹಿಂಬಾಲಿಸಿದ ಯೆರೂಸಲೇಮಿನ ಹೆಂಗಸರ ಗುಂಪನ್ನು ಕಂಡ ಯೇಸುವು ಉಪದೇಶ ಕರುಣಿಸುವನು.

## ೪.೨ ಪಾತ್ರ ಚಿತ್ರಣ

ಧಾರ್ಮಿಕ ಕಥಾನಾಯಕನನ್ನು ಒಳಗೊಂಡ ಪುರಾಣವಾಗಲಿ ಸಾಹಿತ್ಯ ಕೃತಿಯಾಗಲಿ ಕೆಲವು ಎಡರು ತೊಡರುಗಳನ್ನು ಎದುರಿಸಬೇಕಾಗುತ್ತದೆ. ಸಾಮಾನ್ಯನೊಬ್ಬ ಸಾಮಾನ್ಯನಾಗುವ ಸಂದರ್ಭದಲ್ಲಿ ಅತೀ ಭಾವುಕತೆಗೆ ಅವಕಾಶ ಮಾಡಿಕೊಡದ ಹಾಗೆ ಎಚ್ಚರವಹಿಸಬೇಕಾಗುತ್ತದೆ. ಲಭ್ಯ ಮಾಹಿತಿಗಳ ಆಧಾರದಲ್ಲಿ ನೆಲಮಟ್ಟದ ವ್ಯಕ್ತಿಯೊಬ್ಬ ಮುಗಿಲು ಮಟ್ಟದ ಚಾಚುವನ್ನು ಪಡೆದಾಗ ವರ್ಣನೆಯಲ್ಲಿ ಅತಿಶಯತೆ ನುಸುಳಬಹುದು. ಇಂತಹ ಸಂದರ್ಭದಲ್ಲಿ ವ್ಯಕ್ತಿಯ ವ್ಯಕ್ತಿತ್ವ ಮಸುಕಾಗದಂತೆ ಎಚ್ಚರವಹಿಸಬೇಕಾಗುತ್ತದೆ. ಐತಿಹಾಸಿಕತೆ ಧಾರ್ಮಿಕತೆಯ ಲೇಪನವನ್ನು ಪಡೆದಾಗ ಪವಾಡದಂತಹ ವಿಷಯಗಳು ಬಹು ಚರ್ಚಿತ ಅಂಶಗಳಾಗುತ್ತವೆ. ಈ ಹಿನ್ನೆಲೆಯಲ್ಲಿ ಬೈಬಲಿನ ಪಾತ್ರಗಳನ್ನು ಪರಿಶೀಲಿಸುವುದು ಸೂಕ್ತ. ಬೈಬಲ್‌ನಂಥ ಬಹುಜನ ರಚಿತ ಕೃತಿಯಲ್ಲಿ ಆರಾಧನಾ ಮನೋಭಾವ ಫಲವಗಿ ಮಹತ್ವಗಳು ಸೇರುವುದು ಸಹಜ. ಈ ಹಿನ್ನೆಲೆಯಲ್ಲಿ ಬೈಬಲಿನ ಪ್ರಮುಖ ಪಾತ್ರಗಳನ್ನು ಪರಿಶೀಲಿಸಬೇಕಾಗುತ್ತದೆ.

### ೪.೨.೧ ಯೇಸು

ಒಬ್ಬ ಮಹಾಗುರಿವಿನ ಜೀವನವನ್ನು ಕುರಿತ ಶ್ರೇಷ್ಠ ವ್ಯಾಖ್ಯಾನವೆಂದರೆ ಆತನ ಸ್ವಂತ ಜೀವನವೇ! ಯೇಸುವನ್ನು ಕುರಿತು ಬರೆಯುವಾಗ ಸ್ವಾಮಿ ವಿವೇಕಾನಂದರ ಈ ಮಾತು ನೆನಪಿಗೆ ಬರುತ್ತದೆ. ದೈವ ಪ್ರೇಮ-ಮಾನವ ಪ್ರೇಮದ ಸಾಮರಸ್ಯದ ಸಂಕೇತವಾಗಿದೆ ಯೇಸುವಿನ ಬಾಳ್ವೆ ಆ ಕಾರಣವೆ ಎರಡು ಸಾವಿರ ವರುಷಗಳು ಕಳೆದರೂ ಯೇಸುವಿನ ಚಾರಿತ್ರ ಪ್ರಕಾಶಸ್ವರೂಪವೂ ಪ್ರಭಾವ ಪೂರ್ಣವೂ ಆಗಿದೆ.

ರೋಮಿಯ (Roman) ಚಕ್ರವರ್ತಿಯಾದ ಔಗುಸ್ತನ (Augustus ಕ್ರಿ.ಪೂ.೨೩-ಕ್ರಿ.ಶ.೧೪) ಆಳಿಕೆಯಲ್ಲಿ ಆಗ್ಗೆ ರೋಮ ಸಾಮ್ರಾಜ್ಯದಲ್ಲಿ ಒಳಪಟ್ಟ ಯೆಹೂದ್ಯ ಅಥವಾ ಯೂದಾಯದ Judea ಗಲಿಲಾಯದಲ್ಲಿಯ (Galilee) ನಜರೇತ (Nazareth) ಎಂಬ ಊರಿನ ಯೆಹೂದ್ಯನಾದ (Jew) ಯೋಸೇಫ (Joseph) ಎಂಬ ಬಡಗಿಗೆ ತನ್ನ ಹೆಂಡತಿಯಾದ ಮರಿಯೆ (Mary) ಎಂಬವಳಲಿ ಯೇಸು (Jesus) ಹುಟ್ಟಿದನು. ಆತನು ತನ್ನ ಹೆಚ್ಚು ಕಡಿಮೆ ೩೦ನೆಯ ವರ್ಷದಲ್ಲಿ ಸ್ನಾನಿಕನಾದ ಯೋಹಾನನಿಂದ (John the Baptist) ಯೋರ್ದನ (Jordhan) ನದಿಯಲ್ಲಿ ಸ್ನಾನ

ಹೊಂದಿ ತನ್ನ ಧರ್ಮೋಪದೇಶವನ್ನು ಆರಂಭಿಸಿದನು. ಆಗ ಆತನು ೪೦ ದಿನ ಉಪವಾಸವಿದ್ದು ಅರು ತೀರುತ್ತಲೆ ಸೈತಾನನ (Satan) ಶೋಧನೆಗೆ ಒಳಗಾಗಿ ಅದರಲ್ಲಿ ಗೆದ್ದು ಬಂದನು.

ತರುವಾಯ ಆತನು ಕಪೆರ್ನೌಮಿಗೆ (Capernaum) ಹೋಗಿ, ಅಲ್ಲಿ ಕೆಲ ಬೆಸ್ತರನ್ನು ತನ್ನ ಶಿಷ್ಯರಾಗಿಸಿಕೊಂಡು ಅಲ್ಲಿಂದ ಕಾನಾ (Cana) ಎಂಬಲ್ಲಿಯ ಮದುವೆಗೆ ಹೋಗಿ ಅಲ್ಲಿ ನೀರಿಂದ ದ್ರಾಕ್ಷಾರಸವನ್ನು ಮಾಡಿದನು. ಇದೇ ಆತನ ಮೊತ್ತಮೊದಲಿನ ಪವಾಡ. ಅನಂತರ ಗಲಿಲಾಯದಲ್ಲಿ ತಿರುಗಾಡುತ್ತ ಅಲ್ಲಲ್ಲಿ ಹಲಬಗೆಯ ರೋಗಿಗಳನ್ನು ದೆವ್ವಹಿಡಿದವರನ್ನು, ಮರುಳರನ್ನೂ ವಾಸಿಪಡಿಸಿ, ಕೊನೆಗೆ ಅಲ್ಲಿಯದೊಂದು ಬೆಟ್ಟಹತ್ತಿ ತನ್ನ ಮುಂದೆ ನೆರೆದಿದ್ದ ಸಾವಿರರಾರು ಮಂದಿಗೆ ತನ್ನ ಲೋಕವಿಖ್ಯಾತವಾದ ಪರ್ವತಪ್ರಸಂಗವನ್ನು ಮಾಡಿದನು. ಅಲ್ಲಿಂದ ಯೇಸು ಮುನ್ನಡೆದು ಒಬ್ಬ ಕುಷ್ಠಿಯನ್ನೂ ಅರನಾರಿಯಿಂದ ನರಳುತ್ತಿದ್ದ ಶತಾಧಿಪತಿಯ ಆಳನ್ನು ಗುಣಪಡಿಸಿ, ನಾಯಿನ (Nain) ಎಂಬಲ್ಲಿ ಸತ್ತವನೊಬ್ಬ ಯುವಕನನ್ನೂ ಇತರತ್ರ ಯಾಯಿರನೆಂಬ (Jairus) ಒಬ್ಬ ಅಧಿಕಾರಿಯ ಸತ್ತ ಮಗಳನ್ನೂ ಎಬ್ಬಿಸಿ, ೧೨ ಮಂದಿ ಶಿಷ್ಯರನ್ನು ಆಯ್ದುಕೊಂಡು ಅವರಿಗೆ ತನ್ನ ಸುವಾರ್ತೆಯನ್ನು ಸಾರಲಿಕ್ಕೂ ವಿವಿಧ ಬೇನೆಗಳನ್ನು ವಾಸಿಮಾಡಲಿಕ್ಕೂ ಆ ತಕ್ಕಂತೆ ಹೇಳಿಕೊಟ್ಟು ಅವರನ್ನು ಅಲ್ಲಲ್ಲಿಗೆ ಕಳುಹಿಸಿದನು.

ತರವಾಯ ಯೇಸು ಗಲಿಲಾಯ ಸಾಗರದ (Sea of Galilee) ದಡದಲ್ಲಿ ಕುಳಿತುಕೊಂಡು ಪರಲೋಕವನ್ನು ಕುರಿತು ಹಲವು ಸಾಮತಿಗಳಿಂದ ಬೋಧಿಸಿ, ಅಲ್ಲಿ ಎದ್ದ ಬಿರುಗಾಳಿಯನ್ನು ನಿಲ್ಲಿಸಿದನು. ಇನ್ನೊಮ್ಮೆ ತನ್ನೊಡನೆ ಇದ್ದ ೫ ರೊಟ್ಟಿ ೧ ಮೀನುಗಳಿಂದ ೫೦೦೦ ಮಂದಿಗೆ ಊಟ ಹಾಕಿದನು. ಹಾಗೆಯೇ ಕುರುಡರಿಗೆ ಕಾಣಗೊಡಿಸುವುದೇ ಮೊದಲಾದ ಪವಾಡಗಳನ್ನು ಮೆರೆಸುತ್ತ ಕೆಲಕಾಲದ ಬಳಿಕ ಹರ್ಮೋನ (Harmon) ಎಂಬ ಬೆಟ್ಟದಲ್ಲಿ ರೂಪಾಂತರಿಸಿದನು.

ಒಮ್ಮೆ ಯೇಸು ಸಮಾರ್ಯದ (Samaria) ದಾರಿಯಾಗಿ ಹಾದು ಹೋಗುತ್ತಿದ್ದಾಗ ನಡುವೆ ಒಂದು ಬಾವಿಯ ಬಳಿಯಲ್ಲಿ ಯೆಹೂದ್ಯರಾರೂ ಮುಟ್ಟಲೊಲ್ಲದ ಸಮಾರ್ಯದವಳೊಬ್ಬ ಹೆಂಗಸಿಂದ ನೀರನ್ನು ಇಸಕೊಂಡು ಕುಡಿದನು. ಮತ್ತೊಮ್ಮೆ ಆತನು ಇಪ್ಪೇಗುಡ್ಡಕ್ಕೆ ಹೋದಾಗ ವ್ಯಭಿಚಾರದಲ್ಲಿ ಹಿಡಿದ ಒಬ್ಬ ಹೆಂಗಸನ್ನು ಫರಿಸಾಯರು (Pharisees) ತನ್ನ ಮುಂದೆ ತಂದೆ ನಿಲ್ಲಿಸಿ, ಈಕೆಗೆ ಏನು ವಿಧಿ? ಎಂದು ತನ್ನನ್ನು ಕೇಳಿದುದಕ್ಕೆ ಮಾರ್ನುಡಿಯಾಗಿ ನಿಮ್ಮಲ್ಲಿ ಏನೂ ಪಾಪವಿಲ್ಲದವನು ಈಕೆಗೆ ಮೊದಲ ಕಲ್ಲು ಎಸೆಯಲಿ! ಎಂದುದನ್ನು ಕೇಳಿ ಅವರೆಲ್ಲರೂ ಅಲ್ಲಿಂದ ಮೆಯ್ಗುಗ್ಗರೆಯುತ್ತಲೆ, ಅವಳಿಗೆ ಅಮ್ಮಾ ಹೊರಟುಹೋಗು, ಇನ್ನು ಪಾಪ ಮಾಡದಿರು ಎಂದು

ಆಕೆಯನ್ನು ಹಿಂದೆ ಕಳುಹಿಸಿದನು. ಅನಂತರ ಬೆಥಾನ್ಯಕ್ಕೆ (Bethany) ಹೋಗಿ ಅಲ್ಲಿ ೪ ದಿನಗಳ ಹಿಂದೆ ಸತ್ತುಹೋಗಿದ್ದ ಲಾಜರನನ್ನು (Lazarus) ಎಬ್ಬಿಸಿದನು. ಅದರೆ ಅವನ ತವರೂರಿನವರಾದರೊ ಅವನನ್ನು ಒಪ್ಪಲೊಲ್ಲದೆ ಹೀಗಳೆದರು.

ಆಮೇಲೆ ಯೇಸು ತನ್ನ ಶಿಷ್ಯರಿಗೆ ಚಿಕ್ಕ ಮಕ್ಕಳಂತೆ ಇರಬೇಕೆಂದೂ, ತಮ್ಮ ಸಹೋದರರ ಪಾಪಗಳನ್ನು ಕ್ಷಮಿಸಬೇಕೆಂದೂ ಬೋಧಿಸಿ, ಚಿಕ್ಕ ಮಕ್ಕಳನ್ನು ಆಶೀರ್ವದಿಸಿ, ಯಾವನೊಬ್ಬನು ತಾನು ನಿತ್ಯಜೀವಕ್ಕೆ ಅರ್ಹನಾಗುವಂತೆ ಏನು ಮಾಡಬೇಕೆಂದು ಕೇಳಿದುದಕ್ಕೆ ಪ್ರತಿಯಾಗಿ ಆತನಿಗೆ, ನಿತ್ಯಜೀವವನ್ನು ಎಳಸುವವನು, ತನ್ನ ತಂದೆಯಾದ ದೇವರ ಚಿತ್ತದಂತೆ ನಡೆದು ತನ್ನ ಬಯಕೆಗಳನ್ನು ನೀಗಿ ಬಿಡಬೇಕೆಂದು ಹೇಳಿ ಕರುಣಾಳುವಾದ ಸಮಾರ್ಯದವನ ದೃಷ್ಟಾಂತವನ್ನೂ ಆತನಿಗೆ ಕಥಿಸಿ, ಅನಂತರ ದೇವರ ರಾಜ್ಯವನ್ನು ಕುರಿತು ಬಿತ್ತುವವನ ಸಾಸಿವೆ ಕಾಳಿನ, ಹುಳೀ ಹಿಟ್ಟಿನ, ೧೦ ಮಂದಿ ಕನ್ನಿಕೆಯರ ಇತ್ಯಾದಿ ಹಲವು ಸಾಮತಿಗಳನ್ನೂ, ತನ್ನ ಕೆಟ್ಟ ಚಾಳಿಯನ್ನು ಬಿಟ್ಟು ದೇವರ ಕಡೆಗೆ ತಿರುಗಿದ ಪಾಪಿಯನ್ನು ಕುರಿತು ಪರಲೋಕದಲ್ಲಿ ಆಗುವ ಸಂತೋಷವನ್ನು ಸೂಚಿಸುವುದಕ್ಕೆ ಕಳೆದುಹೋದ ಕುರಿಮರಿಯ, ಕಳೆದುಹೋದ ನಾಣ್ಯದ ಹಾಗೂ ದುಂದುಗಾರನಾದ ಮಗನ ಸಾಮತಿಗಳನ್ನು, ದೇವರ ಮುಂದೆ ದೀನಮನಸ್ಕರಾಗಬೇಕೆಂದು ಬೋಧಿಸುವುದಕ್ಕೆ ದೇವಾಲಯಕ್ಕೆ ಪ್ರಾರ್ಥಿಸುವುದಕ್ಕೆ ಹೋದ ಫರಿಸಾರನ ಮತ್ತು ಸುಂಕದವನ (Publican) ಸಾಮತಿಯನ್ನೂ, ಇನ್ನೂ ಇತರ ಸಾಮತಿಗಳನ್ನು ತಿಳಿಯಪಡಿಸಿ, ಹೀಗೆ ಎಷ್ಟೋ ವಿಷಯಗಳನ್ನು ಕುರಿತು ಧರ್ಮೋಪದೇಶ ಮಾಡಿದನು.

ಕೆಲವು ತಿಂಗಳ ಮೇಲೆ ಯೇಸು ಒಂದು ಕತ್ತೆಯನ್ನೇರಿ ರಾಜಠೀವಿಯಲ್ಲಿ ಮೆರವಣಿಗೆಯಿದ ತನ್ನ ಶಿಷ್ಯರೊಡಗೂಡಿ, ಜನಸಮುದಾಯವು ಹೊಸನ್ನ! ಹೊಸನ್ನ! ಎಂಡು ಜೋಹರಿಸುತ್ತಿರಲು ಯೆರೂಸಲೇನನ್ನು (Jerusalem) ಹೊಕ್ಕು ದೇವಾಲಯವನ್ನು ಪ್ರವೇಶಿಸಿ, ಅಲ್ಲಿ ಬಗೆಬಗೆಯ ಮಳಿಗೆಗಳನ್ನು ಇಟ್ಟಿದ್ದ ಬಣಜಿಗರನ್ನೆಲ್ಲಾ ಹೊರಗಟ್ಟಿ, ಅಲ್ಲಿದ್ದ ಕುರುಡರನ್ನೂ ಕುಂಟರನ್ನೂ ವಾಸಿಮಾಡಿ ಅಲ್ಲಿಂದ ಬೆಥಾನ್ಯಕ್ಕೆ ಹೋದನು. ಬೆಥಾನ್ಯದಲ್ಲಿ ಕುಷ್ಟರೋಗಿಯಾದ ಸೀಮೋನನ (Simon) ಮನೆಯಲ್ಲಿ ಊಟಮಾಡುತ್ತಿದ್ದಾಗ ಒಬ್ಬ ಹೆಂಗಸು ಸುಗಂಧತೈಲದ ಭರಣಿಯನ್ನು ಆತನಲ್ಲಿ ಹುಯ್ದು ತನ್ನ ಕೂದಲಿಂದ ಆತನ ಕಾಲುಗಳನ್ನು ಒರೆಸಿದಳು. ಆಕೆ ಮಗ್ದಲದ ಮರಿಯೆ (Mary of Magdala) ಎಂದೂ, ಲಾಜರನ ಸೋದರಿಯಾದ ಮರಿಯೆ ಎಂದೂ, ಅವರಿಬ್ಬರೂ ಒಬ್ಬಳೇ ಎಂದೂ ಅಲ್ಲ ಅವರು ಇಬ್ಬರೆಂದು ಅಭಿಪ್ರಾಯಗಳು ಭಿನ್ನವಾಗಿವೆ.

ಯೇಸು ತನ್ನ ಧರ್ಮದೇಶನೆಯನ್ನು ಪ್ರಾರಂಭಿಸಿದಂದಿನಿಂದ ಅವಕಾಶ ದೊರೆತಂತೆಲ್ಲ ಫರಿಸಾಯರನ್ನು, ಸದ್ದುಕಾಯರನ್ನೂ (Sadduees), ಶಾಸ್ತ್ರಿಗಳನ್ನೂ (Seribes) ಮಹಾಯಾಜಕರನ್ನೂ (High Priests) ಮೊದಲಾದ ಯೆಹೂದ್ಯರನ್ನು ಬೆರಳೆತ್ತಿ ತೋರಿಸಿ ಅವರ ಕಪಟವನ್ನು ದಂಭಾಚಾರವನ್ನೂ ಅಷಾಢಭೂತಿತನವನ್ನೂ, ಸುಣ್ಣ ಬಳಿದ ಸಮಾಧಿಯಂಥಾ ಹೊರಬಿಳುಪನ್ನೂ ಕುರಿತು ಎಷ್ಟೋ ಸಲ ಅಣಕಿಸುತ್ತಿದ್ದನು, ಗದರಿಸುತ್ತಿದ್ದನು, ಹೀಯಾಳಿಸುತ್ತಿದ್ದನು. ಅವರ ನಂಬುಗೆಯ ಮೇರೆಗೆ ದೇವರು ಆದಿಯಿಂದ ಯೆಹೂದ್ಯರೊಂದಿಗೆ ಒಂದು ಒಪ್ಪಂದ ಮಾಡಿರುತ್ತಾನೆ. ಆ ಪ್ರಕಾರ ಆತನು ಅವರನ್ನು ಕಾಪಾಡಬೇಕು, ಅವರು ಆತನನ್ನು ಪೂಜಿಸಬೇಕು; ಆ ಪೂಜನೆಯ ಮುಖ್ಯ ನಿಯಮವೆಂದರೆ ಅವರು ಸಬ್ಬತಿನ (Sabbath) ದಿನವಾದ ಶನಿವಾರವನ್ನೂ ತೀರ ವಿಶ್ರಾಂತಿಯ ದಿನವೆಂದು ಆಚರಿಸಬೇಕು; ಯೇಸುವಾದರೊ ಅದನ್ನು ತೃಣೀಕರಿಸಿ ಸಬ್ಬತಿನಂದು ಏನೂ ಮಾಡಬಾರದೆಂಬುದು ತೀರ ತಪ್ಪು, ಒಳ್ಳೆಯ ಕೆಲಸವನ್ನು ಯಾವಂದೂ ಮಾಡಬಹುದು, ಮಾಡಬೇಕು ಎಂದು ಸಾರಿದನು; ಹೀಗಾಗಿ ಅವರೆಲ್ಲರು ಒಮ್ಮೆಯ್ಯಾಗಿ ಅವನಲ್ಲಿ ಹಗೆ ಕಟ್ಟಿಕೊಂಡಿದ್ದರೇ ಅಲ್ಲ ಅವರಲ್ಲಿ ಹಲವು ಮಂದಿ ಮುಖಂಡರು ಅವನನ್ನು ಹೇಗೆ ಕೊಲ್ಲಿಸೋಣ ಎಂದೂ ಹೊಂಚು ಹಾಕುತ್ತಿದ್ದರು. ಕೊನೆಗೆ ಅವರು ಆತನ ೧೨ ಮಂದಿ ಶಿಷ್ಯರಲ್ಲಿ ಒಬ್ಬನಾದ ಇಸ್ಕರಿಯೋತ ಯೂದನೊದನೆ (Jedas Iscariot) ಆತನನ್ನು ಹಿಡಕೊಡಲಿಕ್ಕೆ ಹಂಚುಮಾಡಿ ಹೊತ್ತು ಕಾಯುತ್ತಿದ್ದರು. ಯೇಸು ಸಾವಂದಿನ ನಿನ್ನೆಯ ಗುರುವಾರದ ರಾತ್ರಿ (ಅಂದರೆ ಯೆಹೂದ್ಯರ ಕಾಲಗಣನೆಯ ಪ್ರಕಾರ ಶುಕ್ರವಾರದ ರಾತ್ರಿ) ಆತನು ಶಿಷ್ಯರೊಂದಿಗೆ ತನ್ನ ಕೊನೆಯ ಪಸ್ಕ ಹಬ್ಬದ (Passover) ಊಟವನ್ನು ಉಂಡು ತೀರಿಸುತ್ತಲೆ ಯೂದನು ಅವರನ್ನು ಬಿಟ್ಟು ಹೊರಟುಹೋದನು. ತುಸು ಬಳಿಕವೇ ಯೇಸು ಮಿಕ್ಕ ಶಿಷ್ಯರೊಂದಿಗೆ ಅಲ್ಲಿಂದ ಎದ್ದು ಇಪ್ಪೇ ಗುಡ್ಡವನ್ನೇರಿ ಗೆತ್ಸೇಮನೆ (Gethsemane) ಎಂಬ ತೋಟಕ್ಕೆ ಹೊಗಿ ನಾಳೆ ತನಗೆ ಅನುಭವಿಸಲಿಕ್ಕಿರುವ ಆ ಯಾತನೆಯನ್ನು ಪದೇ ಪದೇ ಮನಗಂಡು, ಆ ಬಗ್ಗೆ ಮನಸ್ಸು ಸಿದ್ಧವಾಗಿದೆಯಾದರೂ ದೇಹಕ್ಕೆ ಬಲ ಸಾಲದು ಎಂದು ಎದೆಗುಂದಿ ತಂದೆಯೇ ಸಾಧ್ಯವಿದ್ದರೆ ಈ ಪಾತ್ರವನ್ನು ನನ್ನಿಂದ ತೊಲಗಿಸು ! ಆದರೂ ನನ್ನ ಇಷ್ಟವಲ್ಲ, ನಿನ್ನ ಚಿತ್ತದಂತೆ ಆಗಲಿ ! ಎಂದು ಪುನಃ ಪ್ರಾರ್ಥಿಸಿದನು. ಅಷ್ಟರೊಳಗೆ ಪ್ರಧಾನಯಾಜಕರೂ, ಶಾಸ್ತ್ರಿಗಳೂ, ಹಿರಿಯರೂ ಮುಂತಾದ ಆತನ ಹಗೆಯುವರ ಕಡೆಯ ಓಲೆಕಾರರೇ ಮೊದಲಾದವರು ಪಂಜುಗಳನ್ನು ಎತ್ತಿಕೊಂಡಿರುವ ಒಂದು ಗುಂಪನ್ನೊಡಗೂಡಿ ಯೂದನು ಅಲ್ಲಿಗೆ ಬಂದು ಯೇಸುವನು ತೋರಿಸಿ ಕೊಟ್ಟಾಗ ಅವರು

ಯೇಸುವನ್ನು ಹಿಡಕೊಂಡು ಆತನನ್ನು ಮಹಾ ಯಾಜಕನಾದ ಕಾಯಫನ ಬಳಿಗೆ ತೆಗೆದುಕೊಂಡು ಹೋದರು. ಅಲ್ಲಿ ಶಾಸ್ತ್ರಿಗಳು ಹಿರಿಯರೂ ಕೂಡಿಬಂದಿದ್ದರು. ಪೇತ್ರನಾದರೋ ದೂರದಿಂದ ಆತನ ಹಿಂದೆ ಹೋಗುತ್ತಾ ಮಹಾಯಾಜಕನ ಮಠದ ಅಂಗಳದ ತನಕ ಬಂದು ಒಳಗೆ ಹೊಕ್ಕು ಆತನ ಗತಿ ಏನಾಗುವದೋ ನೋಡಬೇಕೆಂದು ಓಲೇಕಾರರ ಸಂಗಡ ಕುಳಿತುಕೊಂಡನು. ಆಗ ಮಹಾಯಾಜಕರೂ ಹಿರಿಯ ಸಭೆಯವರೆಲ್ಲರೂ ಯೇಸುವನ್ನು ಕೊಲ್ಲಬೇಕೆಂದು ಆತನ ಮೇಲೆ ಸುಳ್ಳುಸಾಕ್ಷಿಯನ್ನು ಹುಡುಕಿದರು; ಆದರೆ ಬಹುಮಂದಿ ಸುಳ್ಳುಸಾಕ್ಷಿಗಳು ಬಂದು ನಿಂತರೂ ಏನೂ ಸಿಕ್ಕಲಿಲ್ಲ. ಕಡೆಗೆ ಇಬ್ಬರು ಮುಂದೆ ಬಂದು – ನಾನು ದೇವರ ಆಲಯವನ್ನು ಕೆಡವಿಬಿಟ್ಟು ಮೂರು ದಿನಗಳಲ್ಲಿ ಕಟ್ಟ ಬಲ್ಲೆನೆಂದು ಇವನು ಹೇಳಿದನು ಅಂದರು; ಆಗ ಮಹಾಯಾಜಕನು ಎದ್ದು ನಿಂತು ನೀನೇನು ಉತ್ತರ ಹೇಳುವುದಿಲ್ಲವೋ? ಇವರು ನಿನ್ನ ಮೇಲೆ ಹೇಳುವ ಈ ಸಾಕ್ಷಿ ಏನು ಎಂದು ಆತನನ್ನು ಕೇಳಿದನು. ಆದರೆ ಯೇಸು ಸುಮ್ಮನಿದ್ದನು. ಆಗ ಮಹಾಯಾಜಕನು ನಿನಗೆ ಜೀವಸ್ವರೂಪನಾದ ದೇವರ ಆಣೆಯನ್ನು ಇಡುತ್ತೇನೆ; ನೀನು ದೇವಕುಮಾರನಾದ ಕ್ರಿಸ್ತನು ಹೌದೋ ಅಲ್ಲವೋ ಎಂಬುದನ್ನು ನಮಗೆ ಹೇಳಬೇಕು ಎಂದು ಅನ್ನಲಾಗಿ ಯೇಸು – ನೀನೇ ಹೇಳಿದ್ದೀ; ಇದಲ್ಲದೆ ಇನ್ನು ಮೇಲೆ ಮನುಷ್ಯಕುಮಾರನು ಸರ್ವಶಕ್ತನ ಬಲಗಡೆಯಲ್ಲಿ ಆಸೀನನಾಗಿರುವುದನ್ನು ಆಕಾಶದ ಮೇಘಗಳ ಮೇಲೆ ಕುಳಿತು ಬರುವುದನ್ನು ಕಾಣುವಿರಿ ಎಂದು ನಿಮಗೆ ಹೇಳುತ್ತೇನೆ ಅಂದನು. ಆಗ ಮಹಾಯಾಜಕನು ತನ್ನ ಬಟ್ಟೆಗಳನ್ನು ಹರಕೊಂಡು – ಇದು ದೇವದೂಷಣೆಯ ಮಾತು; ನಮಗೆ ಸಾಕ್ಷಿಗಳು ಇನ್ನು ಯಾತಕ್ಕೆ ಬೇಕು. ಇವನು ಈಗಲೇ ಆಡಿದ ದೂಷಣೆಯ ಮಾತನ್ನು ಕೇಳಿದ್ದಿರಲ್ಲಾ? ನಿಮಗೆ ಹೇಗೆ ತೋರುತ್ತದೆ? ಅನ್ನಲು ಇವನು ಮರಣದಂಡನೆ ಹೊಂದತಕ್ಕವನು ಎಂದು ಉತ್ತರಕೊಟ್ಟನು. ಆಗ ಅವನ ಮುಖದ ಮೇಲೆ ಉಗುಳಿ ಆತನನ್ನು ಗುದ್ದಿದರು; ಕೆಲವರು ಆತನ ಕೆನ್ನೆಗೆ ಏಟುಹಾಕಿ – ಕ್ರಿಸ್ತನೇ, ನಿನ್ನನ್ನು ಹೊಡೆದವರಾರು? ನಮಗೆ ಪ್ರವಾದನೆ ಹೇಳು ಎಂದರು.

048655

ಇತ್ತಲಾಗಿ ಪೇತ್ರನು ಹೊರಗೆ ಅಂಗಳದಲ್ಲಿ ಕುಳಿತ್ತಿದ್ದನು. ಅಲ್ಲಿ ಒಬ್ಬ ದಾಸಿಯು ಅವನ ಬಳಿಗೆ ಬಂದು ನೀನು ಸಹ ಗಲಿಲಾಯದ ಯೇಸುವಿನ ಕೂಡ ಇದ್ದವನು ಅನ್ನಲು ಅವನು – ಅಲ್ಲ, ನೀನು ಏನನ್ನುತ್ತೀಯೋ ನಮಗೆ ಗೊತ್ತಿಲ್ಲ ಎಂದು ಎಲ್ಲರ ಮುಂದೆ ಹೇಳಿದನು. ಅವನು ಅಲ್ಲಿಂದ ಬಾಗಿಲಿನ ಕಡೆಗೆ ಹೊರಟುಹೋಗುವಾಗ ಮತ್ತೊಬ್ಬಳು ಅವನನ್ನು ಕಂಡು ಅಲ್ಲಿರುವವರಿಗೆ – ಇವನೂ ನಜರೇತಿನ ಯೇಸುವಿನ ಕೂಡಾ ಇದ್ದವನು ಎಂದು ಹೇಳಿದಳು. ಆಗ ತಿರಿಗಿ – ಅಲ್ಲ ಆ

ಮನುಷ್ಯನನ್ನು ನಾನರಿಯೆನು ಎಂದು ಆಣೆಯಿಟ್ಟುಕೊಂಡು ಹೇಳಿದನು. ಸ್ವಲ್ಪ ಹೊತ್ತಿನ ಮೇಲೆ ಅಲ್ಲಿ ನಿಂತವರು ಮುಂದೆ ಬಂದು ಪೇತ್ರನಿಗೆ ನಿಶ್ಚಯವಾಗಿ ನೀನು ಸಹ ಅವರಲ್ಲಿ ಒಬ್ಬನು, ನಿನ್ನ ಭಾಷೆಯೇ ನಿನ್ನನ್ನು (ಗಲಿಲಾಯದವನೆಂದು) ತೋರಿಸಿಕೊಡುತ್ತದೆ ಎಂದು ಹೇಳಲಾಗಿ ಅವನು – ಆ ಮನುಷ್ಯನನ್ನು ನಾನರಿಯೆನು ಎಂದು ಹೇಳಿ ಶಾಪಹಾಕಿಕೊಳ್ಳುವುದಕ್ಕೂ ಆಣೆಯಿಡುವುದಕ್ಕೂ ಪ್ರಾರಂಭಿಸಿದನು. ಕೂಡಲೇ ಕೋಳಿ ಕೂಗಿತು ಆಗ ಪೇತ್ರನು ಕೋಳಿ ಕೂಗುವುದಕ್ಕಿಂತ ಮುಂಚೆ ಮೂರು ಸಾರಿ ನನ್ನ ವಿಷಯವಾಗಿ ಅವನನ್ನು ಅರಿಯೆನೆಂಬುದಾಗಿ ಹೇಳುವಿ ಎಂದು ಯೇಸು ಹೇಳಿದ ಮಾತನ್ನು ನೆನಸಿ ಹೊರಗೆ ಹೋಗಿ ಬಹು ವ್ಯಥಪಟ್ಟು ಅತ್ತನು.

ಯೇಸುವಿನ ಜೀವನವೇ ಒಂದು ಹೋರಾಟ ಸತ್ಯಕ್ಕಾಗಿ ಹೋರಾಟ ನಡೆಸಲು ಇಳೆಗೆ ಇಳಿದು ಬಂದ ದೇವಸುತನಿವನು. ಸತ್ಯಪ್ರೇಮಿಗಳು ಮಾತ್ರ ಯೇಸುವಿನ ನಿಲುವನ್ನು, ಆತನ ಅಂತರ್ವಾಣಿಯನ್ನು ಬಲ್ಲರು.

ಪಿಲಾತನು ನಡೆಸಿದ ವಿಚಾರಣೆಯ ಪ್ರಸಂಗದಲ್ಲಿ ಯೇಸುವು ಮಿತಭಾಷಿಯಾಗಿ ತೋರಿದ್ದಾನೆ. "ಯೆಹೂದ್ಯರರಸನೊ ನೀನು?" ಎಂದು ಕೇಳಲು, ಮನಸ್ಸಾಕ್ಷಿಯಂತಿನಿಂದ್ದಾಗಿ 'ನೀನದನೆ ನುಡಿದೆ' ಎಂದು ಯೇಸು ಕಿರುನಿದಿದ್ದಾನೆ.

ಯೇಸು ಸತ್ಯರಾಜ್ಯ ಸಂಸ್ಥಾಪಕ, ಸತ್ಯಕ್ಕಾಗಿಯೇ ಜನಿಸಿದವ ಆತನ ರಾಜ್ಯ ಈ ಲೋಕಕ್ಕೆ ಸಂಬಂಧಪಟ್ಟದಲ್ಲಿ, ಯೇಸುವಿನ ವಿಚಾರಗಳು ಪಿಲಾತನಿಗೆ ಅರ್ಥವಾಗದೆ ಹೋದರು ಆತ ನಿರಪರಾಧಿಯೆಂಬ ಅರಿವನ್ನು ಉಂಟುಮಾಡಿದೆ. ಇದಲ್ಲದೆ ಅವನು ನ್ಯಾಯಾಸನದಲ್ಲಿ ಕೂತಿರುವಾಗ ಅವನ ಹೆಂಡತಿಯ – ನೀನು ಆ ಸತ್ಪುರುಷನ ಗೊಡವೆಗೆ ಹೋಗಬೇಡ; ಅವನ ದೆಸೆಯಿಂದ ಈ ಹೊತ್ತು ಕನಸಿನಲ್ಲಿ ಬಹಳ ತೊಂದರೆ ಪಟ್ಟೆನು ಎಂದು ಅವನ ಬಳಿಗೆ ಹೇಳಿ ಕಳುಹಿಸಿದಳು. ಹಲವು ಬಗೆಯಲ್ಲಿ ಪ್ರಯತ್ನಿಸಿ ಕೊನೆಗೆ ವಿಫಲನಾಗಿ ಮನವಿಲ್ಲದ ಮನದಿಂದ ಪಿಲಾತನು ಯೇಸುವಿಗೆ ಮರಣಾಜ್ಞೆಯನ್ನು ವಿಧಿಸುತ್ತಾನೆ.

ವಧ್ಯಸ್ಥಾನಕ್ಕೆ ಕೊಂಡೊಯ್ಯುವ ಸಂದರ್ಭದಲ್ಲಿ ಬಳಿವಿಡಿದು ಬಂದ ದುಃಖಿತ ಸ್ತ್ರೀಯರನ್ನು ಕಂಡು ಯೆರೂಸಲೇಮ ದುಹಿತೆಯರಿರಾ ನನಗೆ ಗೋಳಾಡದಿರಿ; ನಿಮಗಾಗಿ ನಿಮ್ಮ ಮಕ್ಕಳಿಗಾಗಿ ಗೋಳಾಡಿ ಎಂದು ಜೀವನ ಜಾಗ್ರತೆಯ ಸಂದೇಶವನ್ನು ಯೇಸುವು ನೀಡಿರುವನು.

ಗೊಲ್ಗೊಥಾಗಿರಿಯಲ್ಲಿ ಕಳ್ಳರಿಬ್ಬರ ನಡುವೆ ನಿರ್ದೋಷಿಯಾದ ಯೇಸುವನ್ನು ಸಿಲುಬೆಗೆಕ್ಕಿ ಕೈಕಾಲುಗಳಿಗೆ ಮೊಳೆ ಬಡಿದು, ಜಟಕರಿಸಿದ ಸನ್ನಿವೇಶವಂತೂ ಹೃದಯ ಭೇದಕವಾಗಿದೆ.

ಯೆಹೂದ್ಯರ ಕ್ರೂರತನದ ಪ್ರರಮಾವಧಿಯನ್ನು ಸ್ಫುಟಗೊಳಿಸಿದೆ. ಪ್ರರಮಪಾಪಿಗಳಿಗೂ ಯೇಸುವು ಕ್ಷಮೆಯನ್ನು ತಂದೆಯಲ್ಲಿ ಪ್ರಾರ್ಥಿಸಿರುವುದು ಈ ಮಹಾತ್ಮನ ನಿಲುವನ್ನು ಕಾಣಿಸುತ್ತದೆ.

ಮಧ್ಯಾಹ್ನ ಹನ್ನೆರಡು ಘಂಟೆಯಿಂದ ಮೂರು ಘಂಟೆಯವರೆಗೆ ಈ ದೇಶದ ಮೇಲೆಲ್ಲಾ ಕತ್ತಲೆ ಕವಿಯಿತು. ಸುಮಾರು ಮೂರು ಘಂಟೆಗೆ ಯೇಸು – ಏಲೀ, ಏಲೀ ಲಮಾ ಸಬಕ್ತಾನೀ ಅಂದರೆ ನನ್ನ ದೇವರೇ ನನ್ನ ದೇವರೇ ಯಾಕೆ ನನ್ನನು ಕೈಬಿಟ್ಟದ್ದೀ ಎಂದು ಮಹಾಧ್ವನಿಯಿಂದ ಕೂಗಿದನು. ಅಲ್ಲಿ ನಿಂತಿದ್ದವರಲ್ಲಿ ಕೆಲವರು ಅದನ್ನು ಕೇಳಿ – ಇವನು ಎಲೀಯನನ್ನು ಕರೆಯುತ್ತಾನೆ ಅಂದರು ಕೂಡಲೇ ಅವರಲ್ಲಿ ಒಬ್ಬನು ಓಡಿಹೋಗಿ ಸ್ಪಂಜನ್ನು ತಂದು ಹುಳಿರಸದಿಂದ ತುಂಬಿಸಿ ಕೋಲಿಗೆ ಸಿಕ್ಕಿಸಿ ಆತನಿಗೆ ಕುಡಿಯುವುದಕ್ಕೆ ಕೊಟ್ಟನು. ಮಿಕ್ಕಾದವರು – ಬಿಡು, ಎಲೀಯನು ಬಂದು ಅವನನ್ನು ರಕ್ಷಿಸುವನೇನೋ ನೋಡೋಣ ಅಂದರು. ಯೇಸು ತಿರಿಗಿ ಮಹಾಧ್ವನಿಯಿಂದ ಕೂಗಿ ಪ್ರಾಣಬಿಟ್ಟನು ಆಗ ಇಗೋ ದೇವಾಲಯದ ತೆರೆಯು ಮೇಲಿಂದ ಕೆಳಗಿನವರೆಗೂ ಹರಿದು ಎರಡು ಭಾಗವಾಯಿತು; ಭೂಮಿಯು ಅದುರಿತು; ಬಂಡೆಗಳು ಸೀಳಿಹೋದವು; ಸಮಾಧಿಗಳು ತೆರೆದವು, ನಿದ್ದೆಹೋಗಿದ್ದ ಅನೇಕ ಭಕ್ತರ ದೇಹಗಳು ಎದ್ದವು; ಶತಾಧಿಪತಿಯು ಮತ್ತು ಅವನ ಸಂಗಡ ಯೇಸುವನ್ನು ಕಾಯುತ್ತಿದ್ದವರು ಭೂಕಂಪವನ್ನು ನಡೆದ ಸಂಗತಿಗಳನ್ನು ನೋಡಿ ಬಹಳ ಹೆದರಿಕೊಂಡು ನಿಜವಾಗಿ ಈತನು ದೇವಕುಮಾರನಾಗಿದ್ದವನು ಅಂದರು. ಇದಲ್ಲದೇ ಅನೇಕ ಸ್ತ್ರೀಯರು ಅಲ್ಲಿ ಇದ್ದು ದೂರದಿಂದ ನೋಡುತ್ತಿದ್ದರು. ಇವರು ಯೇಸುವಿನ ಸೇವೆ ಮಾಡುತ್ತಾ ಗಲಿಲಾಯದಿಂದ ಆತನ ಹಿಂದೆ ಬಂದಿದ್ದರು.

ಗೊಲ್ಗೊಥಾದಿಂದ ಮನೆಗೆ ತೆರಳಿದವರಲ್ಲಿ ಸದ್ದಿಲ್ಲ, ಸುಳಿವಿಲ್ಲ, ಆ ಭಿಕರ ಪರಿಸರ ಬಳಿಕ ಚೆಲ್ಲಿದ ಬೆಳದಿಂಗಳು ಯೇಸುವು ದೇವಕುಮಾರನೆಂದನ್ನೂ ಲೋಕಕ್ಕೆ ಅಮೃತವೆರೆದ ಮಹನೀಯನೆಂಬುದನ್ನೂ ಜಗತ್ತಿಗೆ ಸಾರಿದೆ.

**೪.೨.೨: ಪಿಲಾತ:**

ಪಿಲಾತನು ಯೂದಾಯ ದೇಶದ ಅಧಿಪತಿ, ಕೈಸರನ ಪ್ರತಿನಿಧಿ ಒಮ್ಮೆ ಪಸ್ಕ ಹಬ್ಬದ ಸಂದರ್ಭದಲ್ಲಿ ಯೆಹೂದ್ಯರು ಯೇಸುವನ್ನು ಪಿಲಾತನ ವಿಚಾರಣೆಗೆ ಒಪ್ಪಿಸಿದರು. ಮರಣದಂಡನೆಯನ್ನು ವಿಧಿಸು ಎಂದು ಗದ್ದಲ ಮಾಡಿದರು. ಅಸೂಯೆಯಿಂದ ಮೊದಲೇ ಸಭೆ ಸೇರಿ ಆಲೋಚಿಸಿ, ನಿರ್ಧಾರವನ್ನು ಕೈಗೊಂಡು ಯೆಹೂದ್ಯರು ಯೇಸುವನ್ನು ತನಗೆ

ಒಪ್ಪಿಸಿರುವರೆಂಬುದನ್ನು ಪಿಲಾತನು ತಿಳಿದರೂ ಕರ್ತವ್ಯದೃಷ್ಟಿಯಿಂದ ಈ ಪ್ರಸಂಗದಲ್ಲಿ ಭಾಗಿಯಾಗಬೇಕಾಯಿತು.

'ನಿನ್ನ ಯಾಜಕರೆ ನಿನ್ನನ್ನು ನನಗೆ ಒಪ್ಪಿಸುವಂತೆ ನೀನು ಮಾಡಿದ ತಪ್ಪು ಯಾವುದು?' ಎಂದೂ, ಪಿಲಾತ ವಿಚಾರಣೆ ನಡೆಸುವನು. ಆ ಸಂದರ್ಭದಲ್ಲಿ ಯೇಸುವು ಆಡಿದ ನುಡಿಗಳು, ಆತ ಕಾಣಿಸಿದ ಸತ್ಯರಾಜ್ಯ ಕಲ್ಪನೆ – ಪಿಲಾತನಿಗೆ ಅರ್ಥವಾಗದಿದ್ದರೂ ಲಾಲಿಸುವ ಮನೋಧರ್ಮ, ನ್ಯಾಯವನ್ನು ನೀಡುವ ದೃಷ್ಟಿಯಿದೆ.

ವಿಚಾರಣೆ ನಡೆಸಿದ ಬಳಿಕ ಪಿಲಾತನು ಯೆಹೂದ್ಯರ ಬಳಿ ಬಂದು ಈತನಲ್ಲಿ ಯಾವ ಅಪರಾಧವನ್ನೂ ಕಾಣೆನು – ಎಂದು, ಪಸ್ಕ ಹಬ್ಬದ ದಿನ ನಿಯಮದಂತೆ ಯೇಸುವನ್ನು ಬಿಟ್ಟುಕೊಡಲೇ ಇಲ್ಲವೆ ದಂಗೆಗಾರ ಬರಬ್ಬನನ್ನು ಬಿಡುವುದೋ? – ಎಂದು ಅರ್ಥವತ್ತಾದ ಪ್ರಶ್ನೆಯನ್ನೆ ಕೇಳಿದನು. ಹೃದಯಶೂನ್ಯರಾದ ಯೆಹೂದ್ಯರು ಯೇಸುವನ್ನು ಶಿಲುಬೆಗೆ ಏರಿಸು, ಬರಬ್ಬನನ್ನು ಬಿಡಿಸು ಎಂದು ಕೂಗಿದರು. ಗೊಂದಲದ ನಡುವೆಯೂ ಯೇಸುವನ್ನು ಉಳಿಸಲು ಮತ್ತೆ ಪ್ರಯತ್ನಿಸಿದನು. ಮರಣಾಜ್ಞೆಯನ್ನು ವಿಧಿಸಲು ಯಾವ ತಪ್ಪನ್ನು ಕಾಣೆನು; ಕೊರಡೆಯಿಂದ ಬಡಿಸಿ ಇವನನ್ನು ಬಿಡಿಸಿದರೆ ಸಾಲದೇ? ಎಂದು ಪಿಲಾತ ನುಡಿದಾಗ ರಾಜದ್ರೋಹಿಯನ್ನು ಬಿಟ್ಟುಬಿಡುವುದು ರಾಜೋಪಜೀವಿಯ, ರಾಜನೀತಿಯ ಲಕ್ಷಣವಲ್ಲವೆಂದೂ ಯೆಹೂದ್ಯರು ಗದರಿಸಿದರು. ಪಿಲಾತನು ಸ್ವಂತಕ್ಷೇಮದ ದೃಷ್ಟಿಯಿಂದ ಹೆದರಿ ಮರಣಾಜ್ಞೆಯನ್ನು ಯೇಸುವಿಗೆ ನಿರ್ಧರಿಸಿ ಈ ನಿರಪರಾದಿಯ ರಕ್ತಕ್ಕೆ ತಾನು ಹೊಣೆಗಾರನಲ್ಲವೆಂದು ನೀರಬಟ್ಟಲತರಿಸಿ ತನ್ನ ಕೈಗಳನ್ನು ತೊಳೆದುಕೊಳ್ಳುವನು. ಸಿಲುಬೆಯಲ್ಲಿ ತೂಗುಹಾಕಲು 'ಯೆಹೂದ್ಯರ ರಾಜ ನಜರೇತಿನವನೇಸು' ಎಂದು ಹಲಗೆಯನ್ನು ಬರೆಸುವನು. ಆಗ ಯೆಹೂದ್ಯರು ಈ ಬರಹವನ್ನು ಒಪ್ಪದೆ 'ಯೆಹೂದ್ಯರ ರಾಜ ತಾನೆಂದು ಈತನೆಂದನು' ಎಂದಷ್ಟೆ ಬರೆಸು – ಎಂದು ಕೇಳಿಕೊಳ್ಳುತ್ತಾರೆ. ಇದಿಷ್ಟು ಬೈಬಲನ್ನು ಅತಿಕ್ರಮಿಸಿರುವ ಪಿಲಾತನ ಪಾತ್ರದ ವಿಷಯ ಪಿಲಾತನು ಕೊನೆಯಲ್ಲಿ ಆಡಿರುವ ಈ ಮಾತು ಆತನ ಮನಸ್ಸಿಗಾದ ರೋಷ–ಬೇಸರವನ್ನೂ, ಯೆಹೂದ್ಯರ ಬಗೆಗೆ ತಾಳಿದ ತಿರಸ್ಕಾರವನ್ನೂ ಚೆನ್ನಾಗಿ ಸೂಚಿಸುತ್ತದೆ.

ಪಿಲಾತನು ದೇಶಾದಿಪತಿಯಾದರೂ ಹಿಂದೆ ಕೈಸರನಿಂದ ಎಚ್ಚರಿಕೆಯನ್ನು ಪಡೆದಿದ್ದ ಕಾರಣ ಈ ಯೆಹೂದ್ಯರಿಂದ ಮತ್ತೆ ಉಪಟಳವೆಲ್ಲಿ ಆಗುವುದೋ ಎಂದು ಆಲೋಚಿಸಿ ಹೆದರಬೇಕಾಯಿತು.

ಸ್ವಸ್ಥಾನಕ್ಕೆ ಎಲ್ಲಿ ಭಂಗ ಬರುವುದೋ ಎಂಬ ಚಿಂತೆ ಪಿಲಾತನನ್ನು ಕಾಡಿತು. ತನ್ನ ಪ್ರಜ್ಞೆಯೇ ಸಮ್ಮತಿಸದಿದ್ದರೂ ಜನತಾ ಸಂಕಲ್ಪಕ್ಕೆ ಸನ್ನಿವೇಶ ಕಾರಣದಿಂದ ಪಿಲಾತ ಅಭಿಮತವನ್ನಿತ್ತಿದ್ದಾನೆ.

ವಿಚಾರಣೆ ನಡೆಸಿದ ಪಿಲಾತನು ಯೇಸುವಿನಲ್ಲಿ ಯಾವ ತಪ್ಪನ್ನೂ ಕಾಣಲಿಲ್ಲ. ಆದರು ಸಿಲುಬೆಗೆ ಏರಿಸಲು ಅಪ್ಪಣೆಯಿತ್ತಿರುವನು. ಕೊನೆಗೆ ನಿರಪರಾಧಿಯ ರಕ್ತಕ್ಕೆ ತಾನು ಹೊಣೆಯಲ್ಲ ಎಂದಿರುವನು. ಪಿಲಾತನ ಈ ನೀತಿಕಾರ್ಯ ವಿಚಿತ್ರವಾಗಿದೆ. ಮಾನಸಿಕ ಶಾಸ್ತ್ರಾಭ್ಯಾಸಿಗಳಿಗೂ ಪಿಲಾತನ ಪಾತ್ರ ಮಹತ್ವಪೂರ್ಣವಾದ ವಿಷಯ. ಪಿಲಾತನು ನಿರ್ಣಯಾಧಿಕಾರಿಯಾದರೂ ಧೀರಚಿತ್ತನಲ್ಲ. ವಾಸ್ತವವಾಗಿ ಆತನಿಗೆ ಸ್ವತಂತ್ರ್ಯವಿರಲಿಲ್ಲ. ಜೊತೆಗೆ ಪಿಲಾತನು ಸ್ವಾಭಿಮಾನಿ, ಮನೋತೃಪ್ತ, ಸಮಯಾನುಸಾರಿ, ಯೇಸುವಿನ ನುಡಿಗಳು ಮತ್ತು ಆತನ ಆಧ್ಯಾತ್ಮಿಕ ನಿಲುವು ಪಿಲಾತನಿಗೆ ಅರ್ಥವಾಗದೆ ಹೋದುದೂ ಸಹಜ, ಯೇಸುವಿನ ದೇಶದವರೆ ಆ ಮಹಾತ್ಮನ ಬೆಲೆಯನ್ನು ಅರ್ಥಮಾಡಿಕೊಳ್ಳದೆ ಇರುವಾಗ ಅನ್ಯದೇಶೀಯನಾದ ಪಿಲಾತನನ್ನು ಏಕೆ ದೂಷಿಸುವುದು!

ಮಾನವತಾಭಾವಗಳಿದ್ದರೂ ಪಿಲಾತನು ನ್ಯಾಯೋನ್ಮುಖಶೀಲನಾಗದಿರಲು ಕಾಲ, ಸನ್ನಿವೇಶ, ಸ್ವಾಭಿಮಾನದ ಕಟ್ಟಿಗೆ ಆತ ಒಳಗಾದುದೇ ಕಾರಣವಿರಬೇಕು. ಅಂತೂ ಪಿಲಾತ ವಿಭಕ್ತ ವ್ಯಕ್ತಿತ್ವವನ್ನು (Split Personality) ಪಡೆದವನಾಗಿದ್ದಾನೆ. ರೋಮಿಯಾ ಶಾಸನದಡಿಯ ಕೈಗೊಂಬೆಯಾಗಿದ್ದಾನೆ.

**೪.೨.೩ ಯಾಜಕವರ್ಗದವರು:**

ಸ್ವಾರ್ಥಿಗಳಾದ ಯಾಜಕವರ್ಗದವರ ಉದ್ದೇಶ ಯೇಸುವನ್ನು ಕೊಲ್ಲುವುದೇ ಆಗಿತ್ತು. ಯೇಸುವು ತಮ್ಮ ತಪ್ಪುಗಳನ್ನು ಬಯಲಿಗೆಳೆದು, ಒದಗುವ ಸುಖಕ್ಕೆ ವಿಘ್ನ ತಂದೊಡ್ಡುವನೆಂದೂ ಈತನು ಇರುವವರೆಗೆ ತಮಗೆ ನೆಮ್ಮದಿಯಿಲ್ಲವೆಂದೂ ಯಾಜಕವರ್ಗದವರು ಬಗೆದಿದ್ದರು. ನ್ಯಾಯಾಧಿಪತಿ ಪಿಲಾತನಲ್ಲಿ ಯೇಸುವನ್ನು ವಿಚಾರಣೆಗೆ ಯಾಜಕರು ಒಪ್ಪಿಸಿದ್ದು ಸಂಪ್ರದಾಯದ ನಿಯಮಕ್ಕೆ ಅನುಸಾರವಾಗಿ ಆದರೆ ಇದಕ್ಕೆ ಮೊದಲೇ ಸಭೆ ಸೇರಿ ಮರಣದಂಡನೆಯೇ ಸರಿಯಾದ ಶಿಕ್ಷೆಯೆಂದು ನಿರ್ಧರಿಸಿಕೊಂಡು ಬಂದಿದ್ದರು. ಪಸ್ಕ ಹಬ್ಬದಂದು ಶುಚಿಯಿಂದಿರಬೇಕೆಂಬ ನಿಯಮದಿಂದ ಪಿಲಾತನನ್ನು ಅನ್ಯದೇಶಿಯನೆಂದು ಬಗೆದು ಅಂತರಂಗ ಶುಚಿಯಿಲ್ಲದ ಯಾಜಕರು ಭವನದ ಹೊರಗೇ ನಿಂತು ಭಿನ್ನಹ ಸಲ್ಲಿಸಿದ್ದಾರೆ. ತಮ್ಮ ಶಾಸನದಿ ಮರಣದಂಡನೆಗೆ ಎಡೆಯಿಲ್ಲವಾದ ಕಾರಣ ಇಂತಹ ವಧೆಗೆ ಅರ್ಹನಾದವನನ್ನು ರೋಮಿಯಾ ಶಾಸನಕ್ಕೆ

ಒಪ್ಪಿಸಿರುವೆವು. ಈತನು ಧರ್ಮದ್ರೋಹಿ, ರಾಜದ್ರೋಹಿ, ಕೈಸರನಿಗೆ ತೆರಿಗೆಯನ್ನು ತೆರಬಾರದು ಎಂದೂ, ತಾನು ಯೆಹೂದ್ಯ ದೇಶದ ಅರಸು, ದೇವಸುತ ಎಂದೂ ಸಾರುತ್ತಿದ್ದಾನೆ; ಎಂದೆಲ್ಲ ಕಾರಣಗಳನ್ನು ತಿಳಿಸುವರು.

ಪಿಲಾತನು ವಿಚಾರಣೆ ನಡೆಸಿ 'ಯಾವ ತಪ್ಪನ್ನೂ ಕಾಣೆನು' ಪಸ್ಕ ಹಬ್ಬದಂದು ಸೆರೆಯಿಂದ ಒಬ್ಬನನ್ನು ಬಿಡುವ ನಿಯಮದ ಪ್ರಕಾರ 'ಯೇಸುವನ್ನು ಬಿಟ್ಟುಕೊಡಲೇ? ಅಥವಾ ಕೊಲೆಗಾರ ಬರಬ್ಬನನ್ನು ಬಿಡುವುದೋ'– ಎಂದು ಮಾರ್ಮಿಕವಾಗಿ ಪ್ರಶ್ನಿಸುತ್ತಾನೆ. ಸ್ವಾರ್ಥಪರರಾದ ರಾಕ್ಷಸೀ ವೃತ್ತಿಯ ಯಾಜಕರು 'ಬರಬ್ಬನನ್ನು ಬಿಡಿಸು, ಯೇಸುವನ್ನು ಗಲ್ಲಿಗೇರಿಸು' ಎಂದಿದ್ದಾರೆ. ಯಾಜಕವರ್ಗದವರು ಹಿಂಸೆ ಕ್ರೂರದೃಷ್ಟಿಯನ್ನು ಮೂಲತಃ ತಾಳಿದ್ದಾರೆ.

ಯಾಜಕವರ್ಗದವರ ನೆತ್ತರ ತೃಷೆಗೆ ಸಮ್ಮತಿಸಿದ ಪಿಲಾತನು ವಿಧಿಯಿಲ್ಲದೆ ಮರಣದ ಆಜ್ಞೆಯನ್ನು ನಿರ್ಧರಿಸಿ, ಹೊಣೆಗಾರ ತಾನಲ್ಲವೆಂದು ಕೈ ತೊಳೆದುಕೊಳ್ಳುತ್ತಾನೆ ಆಗ ಒಮ್ಮೆಗೆಯೆ 'ಎಮ್ಮ ಮೇಲೆ, ಎಮ್ಮ ಮಕ್ಕಳ ಮೇಲೆ ರಕ್ತವಿರಲಿ' ಎಂದು ಸಂತೋಷದಿಂದ ಯಾಜಕರು ಅರ್ಭಟಿಸಬೇಕಾದರೆ ಅವರ ದ್ವೇಷಕ್ಕೆ ಮಿತಿಯುಂಟೇ!

'ಕೊರಡೆಯಿಂದ ಬಡಿಸಿ ಬಿಡಿಸಿದಡೆ ಸಾಲದೇ?' ಎಂದು ಪಿಲಾತನೆಂದಾಗ ಆತನ ರಾಜ ನೀತಿಯನ್ನೂ ಯಾಜಕರು ಕಟುವಾಗಿ ಟೀಕಿಸಿದ್ದಾರೆ; ಪಿಲಾತನನ್ನು ಹೆದರಿಸಿ ಎಚ್ಚರಿಸಿದ್ದಾರೆ. ತನ್ನ ಸ್ಥಾನಕ್ಕೆ ಎಲ್ಲಿ ಚ್ಯುತಿ ಬರುವುದೋ ಎಂಬ ದೃಷ್ಟಿಯಿಂದ ಹೆದರಿದ ಪಿಲಾತ ಮತ್ತೆ ಯತ್ನಿಸುವುದು ನಿರರ್ಥಕವೆಂದು ಮರಣಾಜ್ಞೆಯನ್ನು ವಿಧಿಸುತ್ತಾನೆ.

ಸಿಲುಬೆಗಿಕ್ಕಿ ಕೈಕಾಲುಗಳಿಗೆ ಮೊಳೆ ಹೊಡೆದರೂ ಯೇಸು ಈ ಕ್ರೂರ ಪಾಪಿಗಳಿಗಾಗಿ ಪರಮಾತ್ಮನಲ್ಲಿ ಕ್ಷಮೆಯನ್ನು ಪ್ರಾರ್ಥಿಸಿದಾಗ ಹಾ! ನಮಗಾಗಿ ಕ್ಷಮೆಯ ಯಾಚಿಸುವುದಂತಿರಲಿ, ನೀ ದೇವಸುತನಾಗಿದ್ದರೀ ಸಿಲುಬೆಯಿಂದೆಳೆದು ಬಾರ ನೋಡುವ' ಎಂದು ಅಣಕಿಸಿದ್ದಾರೆ, ಈ ಸನ್ನಿವೇಶವು ಯಾಜಕರ ಹೃದಯಶೂನ್ಯತೆಯನ್ನು ಮನಗಾಣಿಸುತ್ತಿದೆ.

ನೀತಿವಂತನಾದ ಯೇಸುವನ್ನು ಅನೀತಿವಂತರ ಸಂಗಡ ಸಿಲುಬೆಗೇರಿಸುವುದರಿಂದ ಈತನೂ ಆ ಗುಂಪಿನಲ್ಲಿ ಪರಿಗಣಿತನಾಗುವನು ಎಂಬ ಅರ್ಥ ಯಾಜಕರದಿರಬೇಕು. ಕೊಲೆಗಾರ ಬರಬ್ಬನನ್ನೇ ಬಿಡಿಸು, ಯೇಸುವನ್ನು ಗಲ್ಲಿಗೇರಿಸು– ಎಂದು ಅರಚುವಾಗಲೂ ಮಿಗಿಲಾದ ಅಪರಾಧವನ್ನು ಯೇಸುವು ಮಾಡಿದ್ದಾನೆ ಎಂಬುದು ಜನರಿಗೆ ಗೊತ್ತಾಗಲಿ– ಎಂಬ ದುರಾಲೋಚನೆ ಈ

ಯಾಜಕರಲ್ಲಿದೆ. ಯೇಸುವಿನ ಸರ್ವನಾಶವೇ ಯಾಜಕವರ್ಗದವರ ಸಂಕಲ್ಪ ಎಂಬುದಂತೂ ವಾಸ್ತವ. ಯೇಸುವಿನ ಪ್ರಾರ್ಥನೆಯ ಹಿರಿಮೆಯನ್ನು ಈ ಪಾಷಾಣಹೃದಯದ ಯಾಜಕ ವರ್ಗದವರು ಹೇಗೆ ತಾನೆ ಅರಿಯಬಲ್ಲರು! ದ್ವೇಷಭಾವ, ಕ್ರೂರದೃಷ್ಟಿ, ಹಿಂಸಾವೃತ್ತಿ, ರಾಕ್ಷಸೀಗುಣಗಳಿಂದ ತುಂಬಿದ ಯಾಜಕವರ್ಗದವರ ಚಿತ್ರಣ ಬೈಬಲ್‌ನಲ್ಲಿ ಯಥಾರ್ಥವಾಗಿ ಬಂದಿದೆ.

### ೪.೨.೪ ಮಗ್ದಲದ ಮರಿಯೆ

ಬೈಬಲ್‌ನಲ್ಲಿ ತಾರೆಯಂತೆ ಮಿನುಗಿರುವ ಪಾತ್ರ ಮಗ್ದಲದ ಮರಿಯೆ. ಸಾಂದರ್ಭಿಕವಾಗಿ ಒಂದು ಕಿರುಪಾತ್ರವಾದರೂ ಕಲಾರಹಸ್ಯದ ದೃಷ್ಟಿಯಿಂದ ಲಕ್ಷಿಸುವಂಥದು.

ಮರಿಯೆ ಎಂಬ ಹೆಸರಿನವರು ಹಲವರಿದ್ದಾರೆ. ಯೇಸುವಿನ ತಾಯಿ (Mary) ಯಾಕೋಬ ಮತ್ತು ಯೋಸೆ (james and Joses) ಯ ತಾಯಿ ಮರಿಯೆ ಕ್ಲೋಫನ (Clophan) ಮಡದಿ ಮರಿಯೆ. ಮತ್ತೊಬ್ಬಳು ಮಗ್ದಲದ ಮರಿಯೆ. ಇಲ್ಲಿ ಪ್ರಸ್ತಾಪಿಸಿರುವುದು ಯೇಸುವಿನ ಅನುಯಾಯಿಯಾದ ಮಗ್ದಲದ ಮರಿಯಳನ್ನು (Mary of Magdala) ಈಕೆಯನ್ನು ಪ್ರತ್ಯಕ್ಷ ರತಿಯೆಂದು ಸಾತಿಶಯವಾಗಿ ವರ್ಣಿಸಿದ್ದಾರೆ.

ಸಾಮ್ರಾಟರೂ ಈಕೆಯ ಚೆಲುವನ್ನು ಕಂಡು ಚಕಿತರಾಗಿದ್ದಾರೆ. ಇಂತಹ ಲಾವಣ್ಯವತಿ ಯೇಸುವಿಗೆ ಮನಸೋತು ತನ್ನದೆಲ್ಲವ ಬಿಟ್ಟು ಅನುಯಾಯಿಯಾದದನ್ನು ಕಂಡು ಪಿಲಾತನು ನಿಟ್ಟುಸಿರಬಿಡುವನಲ್ಲದೆ, ಆಕೆಯ ಪವಿತ್ರಪ್ರೇಮ-ದರ್ಮವನ್ನು ಅರಿಯಬಲ್ಲನೇ? ಎಂದು ಸೂಚಿಸುವಾಗ ಪ್ರಾಸಂಗಿಕವಾಗಿ ಈಕೆಯ ಪಾತ್ರ ಸುಳುಹು ಕಂಡಿದೆ.

ಬೈಬಲ್‌ನ ಕೊನೆಯಲ್ಲಿ ಮಗ್ದಲದ ಮರಿಯೆ ಕಾಣಿಸಿಕೊಳ್ಳುತ್ತಾಳೆ. ಯೇಸುವನ್ನು ಸಿಲುಬೆಗಿಕ್ಕಿ ಎಲ್ಲರೂ ಹಿಂತಿರುಗಿದ ಮೇಲೆ ಆ ರುದ್ರಮೌನ ಪರಿಸರದಲ್ಲಿ ಅನತಿದೂರದ ಅತ್ತಿಮರದ ನೆರಳಲ್ಲಿ ನಡುಸಿಲುಬೆಯಲ್ಲಿದ್ದ ಯೇಸುವಿನಲ್ಲಿ ತನ್ನ ದೃಷ್ಟಿ ನೆಟ್ಟು ತನ್ಮಯಳಾಗಿ ಕುಳಿತ ಮಗ್ದಲದ ಮರಿಯಳ ಚಿತ್ರ ಅಂತಃಕರಣಕ್ಕೆ ಬರುತ್ತಿದೆ. ನೆನಹಿನ ಆಳದಲ್ಲಿ ಮುಗ್ಧೆ ಮರಿಯಳ ನಿಲುವು ಚೆಲುವಾಗಿ ತೋರುತ್ತಿದೆ.

## ೪.೩ ತತ್ತ್ವದೃಷ್ಟಿ:

ಯೇಸುವಿನ ರಾಜ್ಯ ಇಹಲೋಕಕ್ಕೆ ಸಂಬಂಧಪಟ್ಟುದಲ್ಲ ಆತನು ಆಧ್ಯಾತ್ಮಿಕ ರಾಜ್ಯದ ಪ್ರಭು; ಸತ್ಯದ ವಿಷಯದಲ್ಲಿ ಸಾಕ್ಷಿ ಹೇಳಲು ಜನಿಸಿದವ ದೇವರ ಕುರಿಮರಿ. ಜಗದ ಪಾಪವನ್ನು ಹೋಗಲಾಡಿಸಲು ದುಷ್ಟರನ್ನು ನಿಗ್ರಹಿಸಲು ಬಂದ ದೇವಕುಮಾರ ಯೇಸುವು ತನಗಾಗಿ ಎಂದೂ ವ್ಯಥೆಪಟ್ಟವನಲ್ಲ; ಮುಂದಿನ ದುರಂತಕ್ಕಾಗಿ ಪರಿತಪಿಸಿದ್ದಾನೆ; ಎಚ್ಚರಿಸಿದ್ದಾನೆ. ಇಂದಿಗೂ ಯೇಸುವಿನ ಬಾಳ್ವೆ ಮತ್ತು ಸಿಲುಬೆಯ ಗುರುತು ದೈವೀ ಶಕ್ತಿ, ಅನಂತ ತತ್ವದ ಸಂಕೇತವಾಗಿದೆ.

ನಿರ್ದೋಷಿಯಾದ ಯೇಸುವನ್ನು ಸಿಲುಬೆಗೇರಿಸಿದ ಸನ್ನಿವೇಶವಂತೂ ಚಿತ್ತವೇಧಕವಾದುದು. ಸಹನೆ, ಕರುಣೆ, ತ್ಯಾಗ, ಪ್ರೇಮದ ಸಾಕಾರ ಮೂರ್ತಿಯಾಗಿ ಯೇಸು ಕಂಡಿರುವನು. ಸಿಲುಬೆಯಲ್ಲಿರುವ ಯೇಸುವಿನ ನಿಲುವು ಅಂದಿನ ಪರಿಸರವೆಲ್ಲವೂ ತಾತ್ವಿಕ ಭಾವದಿಂದ ಸುತ್ತುಗಟ್ಟಿದೆ. ಸ್ವಾರ್ಥಿಗಳಾದ ಯಾಜಕವರ್ಗದವರ ದ್ವೇಷ-ಸಂಕಲ್ಪ ನಿರ್ಧಾರದಿಂದ ಯೇಸುವಿಗೆ ಒದಗಿದ ಶಿಕ್ಷೆ ಮರಣದಂಡನೆ! ನಿರ್ದೋಷಿಯಾದ ಯೇಸುವನ್ನು ಕೊರಡೆಯಿಂದ ಬಡಿದು, ಸಿಲುಬೆಗಿಕ್ಕಿ ಕೈಕಾಲ್ಗಳಿಗೆ ಮೊಳೆ ಜಡಿದಿದ್ದಾರೆ; ಕಳ್ಳರಿಬ್ಬರೊಡನೆ ಪರಿಗಣಿಸಿದ್ದಾರೆ. ಯೇಸುವು ದೇವಸುತನಾದರೂ ಮಾನವ ಶರೀರವನ್ನು ಧರಿಸಿ ಬಂದಿರುವ ಕಾರಣ ಯಾತನೆ ಉಂಟಾಗುವುದು ಸಹಜ. ಇಂಥ ಯಾತನಾ ಪ್ರಸಂಗದಲಿಯೂ ತನಗೆ ಕ್ರೂರ ಶಿಕ್ಷೆಯನ್ನು ಒದಗಿಸಿದ ಪಾಪಿಗಳಿಗಾಗಿ ಪರಮಾತ್ಮನಲ್ಲಿ ಕ್ಷಮೆಯನ್ನು ಬಯಸಿದ್ದಾನೆ. ಸಹಿಸಲಾಗದ ವೇದನೆಯ ಸನ್ನಿವೇಶದಲ್ಲಿಯೂ ದುಃಖ-ದ್ವೇಷಗಳ ತೆರೆ ಪರಂಪರೆಯಲ್ಲಿ ಒಳಗಾಗದೆ 'ತಂದೆಯೆ, ಅವರನ್ನು ಕ್ಷಮಿಸು, ಅವರು ಏನು ಮಾಡುತ್ತಿದ್ದಾರೆ ಎಂಬುದನ್ನು ಅರಿಯರು ಎಂದು ಮೊರೆಹೋಗಿದ್ದಾನೆ. ತನ್ನ ದುಃಖವನ್ನು ಜನರ ಹಂಬಲದಲ್ಲಿ ಮರೆತಿದ್ದಾನೆ. ಯೇಸುವಿನ ದಿವ್ಯಗುಣಗಳೆಲ್ಲವೂ ಮೇಳಗೊಂಡಿವೆ. ಈ ಪ್ರಾರ್ಥನೆಯಲ್ಲಿ ಪಾಪಿಗಳಿಗೂ ಪರಮಾತ್ಮನಲ್ಲಿ ಕ್ಷಮೆಯನ್ನು ಕೋರಿರುವ ದೃಷ್ಟಿ; ತಂದೆಯಲ್ಲಿ ತಾಳಿದ್ದ ಗಾಢವಾದ ಪ್ರೇಮ ಪ್ರಾರ್ಥನೆಯಲ್ಲಿ ಯೇಸುವಿಗಿದ್ದ ದೃಢವಾದ ನಂಬಿಕೆ ಮಾನವ ಪ್ರೇಮ ದೈವಪ್ರೇಮದ ಅಗತ್ಯ, ಕ್ಷಮೆಯ ಮಹತ್ವ-ಇವೆಲ್ಲ ಪ್ರಾರ್ಥನಾ ಸೂಕ್ತಿಯಲ್ಲಿ ಸಮಾವೇಶವಾಗಿವೆ.

ದಯಾಮಯಿಯಾದ ಪರಮಾತ್ಮನು ಪಾಪಿಯನ್ನು ಕ್ಷಮಿಸುವನು ಅದು ಕೆಲಕಾಲ ಹಿಡಿಸಬಹುದು, ಅಷ್ಟೆ ನಮ್ಮ ಕರ್ತವ್ಯ ಮನ್ನಿಸುವುದು ಆದರೆ ಕ್ಷಮಿಸುವ ನಿರ್ಣಯ ನೀಡುವ ಅಧಿಕಾರವು ಪರಮಾತಮಿಗೊಬ್ಬನಿಗೇ ಸೇರಿದುದಾಗಿದೆ.

ಯೇಸುವನ್ನು ಇನ್ನು ಯಾವ ಕ್ರೂರಿಗಳೂ ನೋಯಿಸರು. ಅನಂತ ಶಾಂತಿಯಲ್ಲಿ ಯೇಸುವಿನ ಆತ್ಮ ಲೀನವಾಗಿದೆ, ಬೆಳಕಿನ ನೆಲೆಯನ್ನು ಸೇರಿದೆ. ಈ ಲೋಕದ ಕಷ್ಟದಿಂದ ಯೇಸು ಪಾರಾಗಿದ್ದಾನೆ. ಜಯಶಾಲಿಯಾಗಿ ತಂದೆಯ ಬಳಿ ಸೇರಿದ್ದಾನೆ. ಅಮೃತಪುತ್ರ ಯೇಸು ಅಮರಜ್ಯೋತಿಯಾದನು.

# ಸಂದರ್ಭ ಸೂಚಿ


೧ ಸತ್ಯವೇದ: ಬೈಬಲ್ ಸೊಸೈಟಿ ಆಫ್ ಇಂಡಿಯಾ

೨. ಮತ್ತಾಯ: ಹೊಸ ಒಡಂಬಡಿಕೆ ಪುಟ ೧ ರಿಂದ ೪೧

೩. ಲೂಕ: ಹೊಸ ಒಡಂಬಡಿಕೆ ಪುಟ ೬೭ ರಿಂದ ೧೦೯

೪. ಯೋಹಾನ: ಹೊಸ ಒಡಂಬಡಿಕೆ ಪುಟ ೧೦೯ ರಿಂದ ೧೩೯

೫. ಎಸ್. ಶಿವಾಜಿ ಜೋಯಿಸ್: ಆಕಲನ, ಸಮರಸ ಪ್ರಕಾಶನ ೧೬೬, ಕೆಸರೆ ೩ನೇ ಹಂತ ಆರ್.ಎಸ್. ನಾಯ್ಡುನಗರ, ಮೈಸೂರು ೫೭೦೦೦೨ ಪುಟ ೨೫

ಅಧ್ಯಾಯ ೫.

# ಬೈಬಲ್-ಗೊಲ್ಗೊಥಾ ತೌಲನಿಕ ವಿವೇಚನೆ

೫.೧ ಸ್ವರೂಪ ಮತ್ತು ಪ್ರಸರಣ

೫.೨ ಬೈಬಲ್ ಮತ್ತು ಗೊಲ್ಗೊಥಾದ ಮೌಲ್ಯಮಾಪನ

೫.೩ ಶಿಲುಬೆಯಲ್ಲಿ ನೇತಾಡುತ್ತಿದ್ದ ಯೇಸುವಿನ ದೈವಿಕ ಗುಣ

೫.೪ ಗೊಲ್ಗೊಥಾ, ಬೈಬಲ್ – ಒಂದು ತೌಲನಿಕ ನೋಟ

# ೫. ಬೈಬಲ್ ಗೊಲ್ಗೊಥಾ ತೌಲನಿಕ ವಿವೇಚನೆ

## ೫.೧ ಸ್ವರೂಪ ಮತ್ತು ಪ್ರಸರಣ:

ಗೊಲ್ಗೊಥಾ ಮಂಜೇಶ್ವರ ಗೋವಿಂದ ಪೈಗಳ ಒಂದು ಮಹಾಕಾವ್ಯಖಂಡ (೩೨೨ ಸಾಲುಗಳು) ಗೊಲ್ಗೊಥಾ ಎನ್ನುವುದು ಜೆರೊಸಲೇಮ್ ನಗರದ ಅಗಸೆಯ ಹೊರಗಿನ ದಿನ್ನೆ, ಯೇಸುವನ್ನು ರೋಮನ್ ಚಕ್ರಾಧಿಪತಿ ಕೈಸರನ ಪ್ರತಿನಿಧಿ ಪಿಲಾತನು ವಿಚಾರಣೆ ನಡೆಸಿ ಬಲವಂತವಾಗಿ ಮರಣದಂಡನೆಗೆ ಗುರಿಪಡಿಸಿದ್ದು, ಮುಂದೆ ಪರಿಸಾಯಾರು ಅದನ್ನು ಕಾವ್ಯರೂಪಕ್ಕೆ ತಂದು ಶಿಲುಬೆಗೇರಿಸಿದ್ದು ಇಲ್ಲಿನ ವಸ್ತು. ಇಲ್ಲಿನ ಕಥೆ ಪೈಯವರ ಸ್ವಂತ ಸೃಷ್ಟಿಯೇನೂ ಅಲ್ಲ. ಬೈಬಲ್‌ನ ಕ್ರಿಯೆಗಳನ್ನು ಕಾವ್ಯಾತ್ಮಗೊಳಿಸಿದ್ದೇ ಅವರ ಹೆಗ್ಗಳಿಕೆ. ಬೈಬಲ್‌ನ ಹೊಸ ಒಡಂಬಡಿಕೆಯ ಮತ್ತಾಯ, ಮಾರ್ಕ್, ಲೂಕ ಹಾಗೂ ಯೋಹಾನ. ಇವರ ನಾಲ್ಕು ಸುವಾರ್ತೆಗಳಲ್ಲಿ ದೊರೆವ ಮಾಹಿತಿಗಳೇ ಈ ಕಾವ್ಯಾವ್ಯಾಪಾರದ ಬಂಡವಾಳ ಅದಕ್ಕೆ ಅವರ ಕಾವ್ಯ ಪ್ರತಿಭೆ ರಕ್ತ ಪೂರಣ ಮಾಡಿ, ಈ ಮಹಾಕಾವ್ಯಖಂಡವನ್ನು ಭವ್ಯತೆಯಲ್ಲಿ ಮಹಾಕಾವ್ಯದ ಮಟ್ಟಕ್ಕೆ ಏರಿಸಿದೆ. ಸುವಾರ್ತೆಗಳಲ್ಲಿ ಹೇಳಿದ ಗಲಿಲಾಯ ಸಮುದ್ರ, ಯೋರ್ದನ್ ಹೊಳೆ, ಮೃತ ಸಮುದ್ರ ಮುಂತಾದವುಗಳನ್ನು ಅವರ ಚಿತ್ರಗುಪ್ತ ಪ್ರತಿಭೆ ತಕ್ಕಲ್ಲಿ ಬೆಸೆದು ವಾತಾವರಣ ಸೃಷ್ಟಿಯಲ್ಲಿ ಯಶಸ್ವಿಯಾಗಿದೆ.

## ೫.೨ ಬೈಬಲ್ ಮತ್ತು ಗೊಲ್ಗೊಥಾದ ಮೌಲ್ಯಮಾಪನ:

ನಾಲ್ಕೂ ಸುವಾರ್ತೆಗಳಲ್ಲಿ ನಾವು ಕಾಣುವುದು ಘಟನೆಗಳ ಸರಳ ನಿರೂಪಣೆಯನ್ನು ಪಾತ್ರಗಳ ಆಂತರಿಕ ಗುಣಧರ್ಮವನ್ನಾಗಲೀ, ಅವರ ಒಳಪ್ರಕೃತಿಗೂ ಹೊರಗಿನ ಪ್ರಕೃತಿಗೂ ಕಾಣಿಸುವ ಸಾದೃಶ್ಯದ ಸೊಗಸಾಗಲಿ ಅಲ್ಲಿ ಕಾಣಲಾರೆವು. ಕ್ರಿಯೆಯ ಉದ್ದಕ್ಕೂ ಕೆನೆಗುಟ್ಟುತ್ತಾ ಹೋಗುವ ವಿಷಾದದ ಛಾಯೆಯನ್ನು ಪ್ರತಿಮಿಸುವಲ್ಲಿ ಸಶಕ್ತವಾದ ಪ್ರಕೃತಿಯನ್ನು ಬಳಸಿಕೊಂಡುದು ಸುವಾರ್ತೆಗಳಲ್ಲಿ ಕಾಣಿಸದ ಸಂಗತಿ ಸುವಾರ್ತೆಗಳು ಪ್ರಭುಸಮ್ಮಿತ; 'ಗೊಲ್ಗೊಥಾ' ಸಹಜವಾಗಿ ಕಾಂತಾ ಸಮ್ಮಿತ.

ದೇವಪುತ್ರ ಯೇಸು ತಾನು ಬದುಕಿನಲ್ಲಿ ನಂಬಿಬಂದ ಮೌಲ್ಯದ ಉಳಿವಿಗಾಗಿ ಪ್ರಾಣತೆರಬೇಕಾಯಿತು ಮನಸ್ಸು ಮಾಡಿದ್ದರೆ, ಬದುಕಿನೊಂದಿಗೆ ರಾಜಿಮಾಡಿಕೊಂಡಿದ್ದರೆ ಬದುಕಿ ಉಳಿಯಬಹುದಿತ್ತು. ಫರಿಸಾಯರಿಂದ ಶೋಷಿತನಾದ ಯೇಸು ಶಿಲುಬೆಯ ಮೇಲಿಂದಲೇ

ಸತ್ವಯುತವಾದ ಸಂದೇಶವನ್ನು ನೀಡಿದ್ದು; 'ತನ್ನ ಜೀವನ ಹಾಗೂ ಮರಣದ ಉದ್ದೇಶ ಮಾನವನಲ್ಲಿರುವ ಪ್ರೇಮದ ಅಭಿವ್ಯಕ್ತಿ ಎಂಬ ಯೇಸುವಿನ ಉದಾತ್ತ ನಿಲುಮೆ ಹೀಗೆ ಮೂರ್ತರೂಪ ತಾಳದೆ; 'ಕ್ಷಮಿಸಿ ವರನೆಲೆ ತಂದೆ! ತಾವೇನನೆಸಗಿದಪವಂದರಿಯರವರು' ಯೇಸುವಿನ ಮಹೋನ್ನತ ಉದಾತ್ತ ವ್ಯಕ್ತಿತ್ವವನ್ನು ಕವಿ ಒಂದೆಡೆ ಹೀಗೆ ಚಿತ್ರಿಸಿದ್ದಾರೆ.

> **ಲೋಕವಿವನ ಮನೆ,**
> **ಲೋಕದುದ್ಧಾರಣವೆ ಮನೆವಾರ್ತೆ, ಪಾಪದಿಂ**
> **ಪಾಪಿಗಳನೆತ್ತೆ ಬಾಳ್ವೆಯ ತೆತ್ತ ಬೆಸದರೀ**
> **ತನ್ನ ಬಳಗವಿಳೆಯ ಹೇರಿದ ಭಾರ ಹೊರುವ, ಸಂ**
> **ಕಷ್ಟಗಳ ಮರುವ ದಾಂಟಿಸಿ ಪಾರಗಾಣಿಸುವ**
> **ಒಂಟಿ ಇವನೆಂದಾ ಪಿಲಾತನಕಟರಿವನೇಂ?**

ಮೇಲಿನ ಚಿತ್ರಣದ ಹಿನ್ನೆಲೆಯಲ್ಲಿ ಸುವಾರ್ತೆಯ ಕೆಲವು ಮಾತುಗಳನ್ನು ಗಮನಿಸಬೇಕು. 'ಸ್ವರ್ಗ ಲೋಕದಿಂದ ಬಂದ ಮನುಷ್ಯಕುಮಾರನಾದ ನಾನು ಸೇವೆ ಮಾಡಿಸಿಕೊಳ್ಳುವುದಕ್ಕಾಗಿ ಬರಲಿಲ್ಲ; ಇತರರಿಗೆ ಸೇವೆ ಮಾಡುವುದಕ್ಕಾಗಿ ಮತ್ತು ನನ್ನ ಪ್ರಾಣವನ್ನೇ ಈಡುಮಾಡುವುದಕ್ಕಾಗಿ ಬಂದಿದ್ದೇನೆ' (ಮಾರ್ಕ್ ೧೦: ೪೫) ಇದು ನಿಮಗೋಸ್ಕರ ಕೊಟ್ಟಿರುವ ನನ್ನ ದೇಹ......... ನಿಮ್ಮ ಆತ್ಮಗಳನ್ನು ಕೊಂಡುಕೊಳ್ಳುವುದಕ್ಕೆ ನಾನು ಸುರಿಸಲಿರುವ ರಕ್ತದಿಂದ ಈ ಒಪ್ಪಂದವು ಸ್ಥಾಪಿತವಾಗಿದೆ. (ಲೂಕ್ ೨೨: ೧೯–೨೦) ನನ್ನ ಕುರಿಮಂದೆಗಾಗಿ ನನ್ನ ಪ್ರಾಣವನ್ನೀಯುವ ನಿಷ್ಠಾವಂತ ಕುರುಬ ನಾನು (ಯೋಹಾನ ೧೦:೧೧)

ಯೇಸುವಿನ ಬಲಿದಾನದ ಸೂರ್ಯೋದಯದಿಂದ ಕವಿತೆ ಮೊದಲಾಗುತ್ತದೆ. ಯೇಸುವಿನ ಅನ್ಯಾಯಕ್ಕೆ ಕವಿಯ ಮನಸ್ಸು ಮರಗುವುದರೊಂದಿಗೆ ಮುಂದೆ ಘಟಿಸಲಿರುವ ದುರಂತಕ್ಕೆ ತಕ್ಕ ವಾತಾವರಣ ನಿರ್ಮಾಣ ಮಾಡುವುದರಲ್ಲಿ ಪ್ರಕೃತಿ ವರ್ಣನೆ ಸಹಕಾರಿಯಾಗಿದೆ. ಫರಿಸಾಯರ ಆಂತರಿಕ ಪ್ರಕೃತಿಯನ್ನು ಹೇಳುವಲ್ಲಿ ಬಹಿರಂಗದ ಪ್ರಕೃತಿವರ್ಣನೆ ಸಹಕಾರಿಯಾಗಿದೆ. ಮೂರನೆಯ ಜಾವದ ಕೋಳಿ ಕೂಗಿದ್ದಾಯಿತು. ಯೇಸುವನ್ನು ಕೊಲ್ಲಬಯಸಿದ ಯೆಹೂದ್ಯರ ಮನಸ್ಸಾಕ್ಷಿಯಂತೆ ಅದು ಸುಮ್ಮಗಾಯಿತಂತೆ. ಯೇಸುವನ್ನು ಅವರು ಕೊಲ್ಲಲು ನಿರ್ಧರಿಸಿಯಾಗಿದೆ. ಅಂದರೆ ಅವರೊಳಗಿನ ವಿವೇಕ ಮೌನತಾಳಿದೆ. ಅದು ಒಳಗಿನ ಹಿಂಸ್ರಾಮತಿಯೊಳಗೆ ಏನೇನೂ ಪ್ರಭಾವ ಬೀರದೆ ಹೋಗಿದೆ. ಅನ್ಯಾಯದ ವಿಚಾರಣೆಗೆ ಹೇಸಿ ಚಂದ್ರನೂ ಮುಳುಗುತ್ತಿದ್ದಾನೆ. ಈ ದುರ್ದಿನವನ್ನು ಎಂತು ಮೂಡಿಸುವೆನೆಂದು ಸೂರ್ಯನಿಗೂ ಸಂಕಟ.

ಪಿಲಾತನ ಅರಮನೆಗೆ ಯೇಸುವನ್ನು ಕರೆದೊಯ್ದು "ಇವನು ತಾನೇ ಕ್ರಿಸ್ತನೆಂಬ ರಾಜನೆಂದು ಹೇಳುತ್ತಾ, ಸೀಸರನಿಗೆ ತೆರಿಗೆ ಕೊಡಬಾರದೆಂದು ಬೋಧಿಸುತ್ತಾ ನಮ್ಮ ದೇಶದವರ ಮನಸ್ಸನ್ನು ಕೆಡಿಸುತ್ತಿದ್ದಾನೆ" ಎಂದು ದೂರಿತ್ತರು. (ಲೂಕ: ೨೩:೨) ಈ ಮಾತನ್ನು ಪೈಯವರು 'ಕೈಸರಗೆ ತೆರಿಗೆಯಂ ತೆರಬಾರದೆಂದು ಮಾಣಿಸಿದವಂ' ಎಂದು ಹೇಳಿದ್ದರೂ ವಾಸ್ತವಿಕವಾಗಿ ಲೂಕನ ಸುವಾರ್ತೆಯಲ್ಲಿ ಕೈಸರನನ್ನು ಕೈಸರನಿಗೆ ಕೊಡಬೇಕೆಂದು ಯೇಸು ಹೇಳಿದುದಾಗಿ ಬರೆದಿದೆ. ಪಿಲಾತನಿಗೆ ಯೇಸುವಿನಲ್ಲಿ ಯಾವುದೇ ತಪ್ಪು ಕಾಣಿಸಲಿಲ್ಲ 'ಲೋಕದುರು ಪಾಪವಂ ಹೊತ್ತ ಕುರಿಮರಿಯಂತೆ (ಯೋಹಾನ ೧:೨೯) ಗಿಡುಗಗಳ ನಡುವೆ ತೊಡರಿದ ಕಪೋತಕದಂತೆ ಯೇಸು ಅವನಿಗೆ ಕಾಣಿಸಿದ. 'ಇವನೊಳೇನುವುಪರಾಧಮಂ ಕಾಣೆ' ಎಂದು ಪಿಲಾತ ಸಹಜವಾಗಿ ನುಡಿದಾಗ ಯೇಸುವಿನ ಪ್ರಾಣಕ್ಕಾಗಿ ಹಾತೊರೆದ ಫರಿಸಾಯರು 'ಶಿಲುಬೆಗೆ ಹಾಕಿಸು' ಎಂದು ಆರ್ಭಟಿಸಿದ ಸಂಗತಿ ಸುವಾರ್ತೆಗಳಲ್ಲಿ ದೊರೆಯುತ್ತದೆ.

ಪ್ರಜಾಪ್ರತಿನಿಧಿ ಪಿಲಾತನನ್ನು ಝುಂಕಿಸಿ ಬೆದರಿಸಬಲ್ಲ ಕುಟಿಲನೀತಿಯನ್ನು ಬಳಸಿದ ತಂತ್ರ ಸುವಾರ್ತೆಗಳಲ್ಲಿ ಇಲ್ಲದ ಪೈಯವರದೇ ಸೃಷ್ಟಿ (ಪಿಲಾತನು ಹಿಂದೆ ಮೂರು ಸಲ ಯೆಹೋದ್ಯರ ಮನನೋಯಿಸಿದ ಸಂಗತಿ ಪೈಯವರಿಗೆ Dean Farrar's Life of Christ Chap. Lx ದೊರೆತುದಾಗಿ ತಿಳಿಯುತ್ತದೆ. ನೋಡಿ ಗೊಲ್ಗೊಥಾ ಟಿಪ್ಪಣಿ–೨೧) 'ನೀನು ಬಿಡುಗಡೆ ಮಾಡಿದರೆ ಸೀಸರನಿಗೆ ಮಿತ್ರನಲ್ಲ.......' ಎಂದು ಬೆದರಿಕೆ ಹಾಕಿದಾಗ ತನ್ನ ಭವಿಷ್ಯವನ್ನು ಎಣಿಸಿಕೊಂಡು ಪಿಲಾತನು ನೆರೆದ ಸಮೂಹ ದಂಗೆಯೆದ್ದೀತು ಎನ್ನುವ ಭಯದಿಂದ ಮರಣದಂಡನೆಗೆ ಒಪ್ಪಿಗೆ ನೀಡುತ್ತಾನೆ. ಇಲ್ಲಿ ಪೈಯವರು ಪಿಲಾತನ ಮನಸ್ಸಿನಲ್ಲಿ ನಡೆದ ಸಂಘರ್ಷವನ್ನು ಸೊಗಸಾಗಿ ಚಿತ್ರಿಸುತ್ತಾರೆ. ಮಿಸುನಿಯ ಒರೆಯಿಂದ ಮಿಸುಕುವ ಅಸಿಧಾರೆಯಂತಿರುವ ಫರಿಸಾಯರ ಮಾತು; 'ನಮ್ಮ ಜೋಕೆಯಂ ಬಗೆಯದೊಡೆ, ನಿನ್ನ ಜೋಕೆಯನೆ ಮುಂಗಾದುಕೊಳುಜೀಯಾ' ಪಿಲಾತ ಮನಸ್ಸಿನ ತುಮುಲದ ಕೊನೆಯಲ್ಲಿ ತನ್ನ ಪೀಠದ ಭದ್ರತೆಯನ್ನೇ ಎಣಿಸಿಕೊಂಡ, ತಾನು ಮರಣದಂಡನೆಗೆ ಒಪ್ಪದಿದ್ದಲ್ಲಿ 'ಗಂಡೋಲಿಗಳ ಗೂಡಿಗೆಸೆದ ಕಲ್ಲಂತಾಗದಿರದು' ಎಂದು ನಿರ್ಧರಿಸಿ 'ಮುದಿಯ ಮೊಸಳೆಯ ಮಡುವಿಗಿನ್ನೊಮ್ಮೆ ಧುಮುಕುವೆನೆ? ಹಳಗಿಪಡೆ ಹುಲಿಯ ಹಸಿವೆಗೆ ಹೋತನೀವಂತೆ ಈತನೀವೆನ್" ಎನ್ನುವ ಮಾತುಗಳು ಪೈಯವರ ಪ್ರತಿಭೆಯ ಫಲಗಳು.

ಶಿಲುಬೆಯೊಂದಿಗೆ ಮಟಮಟ ಮಧ್ಯಾಹ್ನದ ಹೊತ್ತು ಯೇಸು ಗೊಲ್ಗೊಥಾ ಬೆಟ್ಟಕ್ಕೆ ಬಂದಿದ್ದಾನೆ. ಸೂರ್ಯನ ಕಾಂತಿ ಮಂದವಾಗಿದೆ. (ಲೂಕ - ೨೩:೪೪)

**ನಡುಹಲಗರಿಸಿಹೊತ್ತು, ಭಾಸ್ಕರನ ಸುಳಿವಿಲ್ಲ**

**ನೊಡೋಂದೆ ಬರಮೋಡ ಬಾನಗಲ ಬಾಚಿ ನೋಹನ**

**ಕಾಲದಾ ಪ್ರಲಯ ಮೇಘವೆನೆ ಮುಚ್ಚಿಹುದು.**

ನೋಹನ ಕಾಲದಲ್ಲಿ ನಡೆದ ಜಲಪ್ರಳಯವನ್ನು ನೆನಪಿಸಿ ಆ ಕಾಲದ ಕಗ್ಗತ್ತಲೆಯನ್ನು ಅದಕ್ಕೆ ಹೋಲಿಸುತ್ತಾರೆ. ಇದು ಪೈಯವರ ವ್ಯಾಪಕ ಕ್ರೈಸ್ತ ಸಾಹಿತ್ಯದ ಓದಿನ ಫಲ. ನೋಹ ತನ್ನ ಕಾಲದಲ್ಲಿ ಜಲಪ್ರಳಯವಾದಾಗ ಎಲ್ಲವೂ ಕಳೆದುಹೋದೀತೆಂದು ಜೀವ ಬೀಜಗಳನ್ನು ತನ್ನ ದೋಣಿಯಲ್ಲಿಟ್ಟುಕೊಂಡು ಕಾಪಿಟ್ಟನಂತೆ. ಇಂದು ನೋಹನಂತಿರುವವನು ಯೇಸು. ತನ್ನ ಬಲಿದಾನದ ಮೂಲಕ ಪ್ರಪಂಚಕ್ಕೆ ಅಮೃತತ್ವವನ್ನು ತಂದುಕೊಟ್ಟವನು. ಈ ಬಿಡಿಚಿತ್ರಗಳೆಲ್ಲ ಮುಂದಿನ ದುರಂತಕ್ಕೆ ಗಂಭೀರಾಂಶಗಳನ್ನು ಬೆಸೆಯುತ್ತಾ ಹೋಗುತ್ತವೆ.

ಗಾಳಿಗೂ ಉಸಿರುಕಟ್ಟಿದಂತಾಗಿದೆ, ಗಿಡಮರಗಳು ಸ್ತಬ್ಧವಾಗಿವೆ, ಹಕ್ಕಿಗಳು ಮೂಕವಾಗಿವೆ, ಜನರಾದರೋ ಮಿಡಿತೆಗಳಂತೆ ಗುಂಪುಗೂಡಿ ಗೊಲ್ಗೊಥಾ ಗಿರಿಯೆಡೆಗೆ ಹೊರಟಿದ್ದಾರೆ. ಅಕ್ಕಪಕ್ಕದಲ್ಲಿ ಇಬ್ಬರು ಕಳ್ಳರ ನಡುವೆ ಯೇಸುವನ್ನು ಶಿಲುಬೆಗೇರಿಸಲಾಗಿದೆ.

**............ಹದ್ದು ಬಿಗಿವಿಡಿದ**

**ಲಾವಿಗೆಯಂತೆ, ಪಡುವಣದಿ ಬಿಳಿಯ**

**ಬಿದಿಗೆಯ ತಿಂಗಳಂತೆ, ಬಿಲ್ಲಿಗೆ ತೊಟ್ಟ ಸರಳಂತೆ**

**ಮರಣವೃಕ್ಷದೊಳಮೃತ ಫಲದಂತೆ**

ಇಲ್ಲಿನ ಒಂದೊಂದು ಮತೂ ಯೇಸುವಿನ ಸ್ಥಿತಿಯನ್ನು ಅರ್ಥಪೂರ್ಣವಾಗಿ ಧ್ವನಿಸುತ್ತವೆ. ಶಿಲುಬೆಯ ಮೇಲೆ ನೇತಾಡುತ್ತಿರುವ ಯೇಸುವನ್ನು ಕುರಿತು ಹೇಳಿದ ಹೋಲಿಕೆಗಳು ಮೂರ್ತದಿಂದ ಅಮೂರ್ತದೆಡೆಗೆ ಏರೇರುತ್ತಾ ಹೋಗಿ ಅವನ ದಿವ್ಯದರ್ಶನವನ್ನು ಮೂಡಿಸುತ್ತವೆ. ಹದ್ದುಬಿಗಿಹಿಡಿದ ಲಾವಕಹಕ್ಕಿ ಸೌಮ್ಯವಾಗಿ ಸಾವಿಗೆ ಸಿದ್ಧವಾದಂತಿದೆ. ಪಶ್ಚಿಮ ಆಕಾಶದಲ್ಲಿ ಬಿದಿಗೆಯ ಚಂದ್ರನು ಮೂಡಿ ಕೆಂಪು ಬೆಳಕನ್ನು ಬೀರುವಂತೆ ಯೇಸು ಕಾನಿಸುತ್ತಿದ್ದಾನೆ. ಬಿಲ್ಲಿಗೆ ಹೂಡಿದ ಬಾಣವು ನೇರವಾಗಿ ಗುರಿಯೆಡೆಗೆ ಸಾಗಲು ಸಿದ್ಧವಾದಂತಿದೆ. ಹುತಾತ್ಮ ಯೇಸುವನ್ನು ಮರಣವೆಂಬ ವೃಕ್ಷದಲ್ಲಿ ಬಿಟ್ಟ ಅಮೃತಫಲ ಎನ್ನುವ ಮಾತು ತುಂಬ ಅರ್ಥಪೂರ್ಣ ಏಕೆಂದರೆ ಆತ ದೇವಪುತ್ರ, ಅಮೃತಪುತ್ರ.

**೫.೨: ಶಿಲುಬೆಯಲ್ಲಿ ನೇತಾಡುತ್ತಿದ್ದ ಯೇಸುವಿನ ದೈವಿಕ ಗುಣ:**

ಶಿಲುಬೆಯಲ್ಲಿ ನೇತಾಡುತ್ತಿದ್ದ ಯೇಸುವಿನ ದೈವಿಕ ಗುಣವನ್ನು ಪೈಯವರು ಹಿಗೆ ಹೇಳಿದ್ದಾರೆ:

..........ತಾಯ ಮೊಗ
ನೋಡೆ ಮಗು ಬೆಸಲಳಲನೊತು ಸೈರಿಸುವಂತೆ
ಚೂಣಿಯ ಭಟಂ ಗಾಯದಳಲ ಲೆಕ್ಕಿಸದೆ ಮುಂ
ಗಾದಾಡಿ ಮಡಿದು ಜಯ ಪಡೆವಂತೆ ತನ್ನ ತೊರೆ
ದರ್ಭಕರ ಹಂಬಲಿಸುವ ಮುಮೂರ್ಷು ತಾಯಂತೆ
ತನ್ನ ಕಡಿವರ್ಗೆ ತಣ್ನೆಳಲೀವ ಮರದಂತೆ

ನಾಲ್ಕೂ ಸುವಾರ್ತೆಗಳಲ್ಲಿ ಯೇಸು "ತಂದೆಯೇ ನನ್ನ ಆತ್ಮವನ್ನು ನಿನಗೆ ಒಪ್ಪಿಸುತ್ತೇನೆ" ಎಂದು ಗಟ್ಟಿಯಾಗಿ ಕೂಗಿ ಪ್ರಾಣಬಿಟ್ಟನು ಎಂದು ಹೇಳಿದೆ. ಕವಿಗೆ ದೇವಮಾನವನ ಸಾವನ್ನು ಹೇಳಲು ಇಷ್ಟೇ ಮಾತುಗಳು ಸಾಲಲಿಲ್ಲ.

..........ತುದಿ ಬೆಟ್ಟದಿಂ
ಕರೆವ ತಾಯಡೆಗೆ ಮರಿಜಿಂಕೆ ಜಿಗಿವಂತೆ
ಸುಗ್ಗಿಯೆಡೆಗಯ್ದುವಾ ಬಾನಕ್ಕಿಯಂತೆ, ದಿನ
ಮುಖದೊಳಿರುಳಿನ ಸೊಡರು ನೇಸರಂಬುಗುವಂತೆ
ಕ್ಷಿತಿಜದಿಂ ಸಿಡಿದು ಮೇಲ್ನೆಗೆವ ಮಿಂಚಂತೆ, ಯೇ
ಸುವಿನಾತ್ಮದೊಡನೆ ಬೆಳಕಿನ ಬೀಡಿಗಯ್ದೆ........

ದೇವಸುತನ ಮೃತಿನಾಟಕದ ಕಡೆಯ ತೆರೆಯಂತೆ ಬಿರುಗತ್ತಲೆಯೊಂದು ಭೂವ್ಯೋಮಗಳ ನಡುವೆ ಮುಸುಕಿತು. ಅದು ಕವಿಗೆ ಮಿಸ್ರದೊಂಬತ್ತನೆಯ ಮಾರಿಯಂತೆ ಕಂಡಿತು. (ಸುವಾರ್ತೆಗಳಲ್ಲಿ ಈ ಸಂಗತಿ ಇಲ್ಲ) ಸ್ವಲ್ಪ ಹೊತ್ತಲ್ಲಿ ಆ ಕತ್ತಲೆಯ ಮೋಡ ಸರಿಯಿತು. ಎಳೆಗಾಳಿ ಸುಳಿಯಿತು. 'ಗೊಲ್ಗೊಥಾ'ದ ಹಿಂದಣಿಂದುದಿಸಿದ ಸುಧಾಸೂತಿ ಬೆಳ್ಗೊಡೆಯನಮೃತನಾ ಮೃತಮೂರ್ತಿಗೆತ್ತಿಹಂ' ಚಂದ್ರೋದಯವಾದ ಮೇಲೂ ಯೇಸುವಿನ ಕಳೇಬರ ಶಿಲುಬೆಯಲ್ಲಿತ್ತೆಂಬ ಹೇಳಿಕೆ ಪೈಯವರೇ ಹೇಳುವಂತೆ ಕವಿಸಮಯ. ಶಿಲುಬೆಗೇರಿಸಿದ ದಿನ ಶುಕ್ರವಾರದ ಸಂಜೆಯಿಂದಲೇ ಸಬ್ಬತು. ಅಂದರೆ ವಿಶ್ರಾಂತಿಯ ದಿನವಾದುದರಿಂದ ಅಂದು ಆ ಶವವನ್ನು ಶಿಲುಬೆಯಲ್ಲಿ ಇರಗೊಡದೆ ಸಂಜೆಯ ಮೊದಲೇ ಇಳಿಸಿದ ವಿವರ ಸುವಾರ್ತೆಗಳಲ್ಲಿ, ಮಗ್ದಲದ ಮರಿಯೆಯನ್ನು ಕುರಿತು ಕವಿ 'ದಾವೀದ ಕುಲದಾದಿತ್ಯನ ನವಪ್ರಬೋಧನದ ಮುಂಗೋಳಿ' ಎನ್ನುವಲ್ಲಿ ಸುವಾರ್ತೆಗಳಲ್ಲಿ ದೊರೆವ ಯೇಸುವಿನ ಪುನರುತ್ಥಾನವು ನೆನಪಾಗುತ್ತದೆ.

ಸುವಾರ್ತೆಗಳಲ್ಲಿ ಹೇಳಿದ ಘಟನಾವಳಿಗಳೆಲ್ಲ 'ಗೊಲ್ಗೊಥಾ'ದಲ್ಲಿ ಕಾವ್ಯವಾದುದು ಬಲುಮಟಿಗೆ ಇಲ್ಲಿ ತುಳುಕುತ್ತಿರುವ ಉಪಮೆಗಳಿಂದ. ಅವು ಸೌಂದರ್ಯಾನುಭವದ ಅಭಿವ್ಯಕ್ತಿಗಳು, ಪಾಶ್ಚಿಮಾತ್ಯರ ಮಹಾಕಾವ್ಯಗಳಲ್ಲಿ Epic Similie ಎಂದು ಕರೆಯಲಾಗುವ ಮಹೋಪಮೆಗಳಿವೆ. ಮಹಾಕಾವ್ಯಗಳಿಗೆ ಇಂತಹ ಮಹೋಪಮೆಗಳು ಅನಿವಾರ್ಯ ಅಂಶಗಳು. ಆದರೆ ಗಾತ್ರದಲ್ಲಿ ಕಿರಿದಾದ ಅತ್ಯಂತ ಕ್ರಿಯಾವೇಗವುಳ್ಳ ಮಹಾಕಾವ್ಯಖಂಡಗಳಲ್ಲಿ ಇಲ್ಲಿನಂತೆ ಹಾಳತವಾಗಿ ಉಪಮೆಯನ್ನು ಬಳಸುವುದು ತಕ್ಕುದಾದುದು. ಮಹೋಪಮೆಯ ಕೆಲಸವನ್ನೆಲ್ಲ ಸೀಮಿತಹರಹಿನ ಖಂಡ ಕಾವ್ಯದಲ್ಲಿ ಉಪಮೆ ಮಾಡುವುದು ಖಂಡಿತ.

ಬೈಬಲ್‌ನ ಸುವಾರ್ತೆಗಳಲ್ಲಿ ದೊರಕಿದ ಅದುರು ಪೈಯವರ ಕೈಯಲ್ಲಿ ಸಂಸ್ಕರಿತವಾಗಿ ಸೊಗಸಾದ ಮಿಸುನಿಯ ತೊಡವಾಗಿದೆ.

**೩.೩ ಗೊಲ್ಗೊಥಾ, ಬೈಬಲ್-ಒಂದು ತೌಲನಿಕ ನೋಟ:**

ಯೇಸುವಿನ ಕೊನೆಯ ದಿನ 'ಗೊಲ್ಗೊಥಾ' ಕವನದ ವಸ್ತು, ಈ ವಸ್ತುವನ್ನು ಬೈಬಲಿನ ಹೊಸ ಒಡಂಬಡಿಕೆಯಲ್ಲಿರುವ ಮ್ಯಾತ್ಯು, ಮಾರ್ಕ್, ಲೂಕ್ ಮತ್ತು ಜಾನ್-ಇವರ ಸುವಾರ್ತೆಗಳಿಂದ ಪೋನಿಸಿಕೊಂಡಿರುವುದಗಿ ಕವನದ ಮುನ್ನುಡಿಯಲ್ಲಿ ಹೇಳಿದೆ. ಇದಲ್ಲದ ಡೀನ್ ಫಾರ್‍ರಾರ್, ರನಾನ್ ಮತ್ತೊ ಮೊಫಟ್ ಇವರು ಬರೆದಿರುವ ಯೇಸುವಿನ ಜೀವನ ಚರಿತ್ರೆಗಳನ್ನು ಕವಿಗಳು ಅಧ್ಯಯನ ಮಾಡಿರುವುದಾಗಿ ತಿಳಿದುಬರುತ್ತದೆ. ಟೆನಿಸನನ 'ಇನ್ ಮೆಮೊರಿಯಮ್' ಕವನದ ಎರಡು ಪಂಕ್ತಿಗಳನ್ನು ತಮ್ಮ ಮಾತುಗಳಿಗೆ ಆಧಾರವಾಗಿ ಒಂದೆಡೆ ಕವಿ ಕೊಟ್ಟಿದ್ದಾರೆ. ಗ್ರೀಕ್ ಭಾಷೆಯನ್ನು ಪೈ ಅವರು ಕಲಿತಿದ್ದರು. ಈ ಕವನದ ವಸ್ತುವಿಗೆ ಬೇಕಾದ ಹೊಸ ಒಡಂಬಡಿಕೆಯ ಗ್ರೀಕ್ ಆವೃತ್ತಿಯನ್ನು ಉಪಯೋಗಿಸಿಕೊಂಡಿರುವುದಾಗಿ ಅವರು ಹೇಳಿದಂತೆ ಕಾಣದು; ತಾನು ಉಪಯೋಗಿಸಿದ ಇಂಗ್ಲೀಷ್ ಆವೃತ್ತಿ ಯಾವುದು ಎಂಬುದನ್ನೂ ಅವರು ಹೇಳಲಿಲ್ಲ.

ಪೈ ಅವರ ಮುನ್ನುಡಿಯಲ್ಲಿರುವ ಯೇಸುವಿನ ಜೀವನ ವೃತ್ತಾಂತವನ್ನು ನೋಡಿದರೆ ನಾಲ್ಕು ಸುವಾರ್ತೆಗಳನ್ನು ಹೇಗೋ ಹೊಂದಾಣಿಸಿಕೊಂಡು ಅವುಗಳಲ್ಲಿ ಸಾಂಗತ್ಯವನ್ನೇರ್ಪಡಿಸುವ ಸಂಪ್ರದಾಯವನ್ನು ಬಿಟ್ಟು ಕವಿ ಮುಂದುವರಿದಂತೆ ಕಾಣುವುದಿಲ್ಲ. ಒಬ್ಬೊಬ್ಬ ಸೌವಾರ್ತಿಕನ ವೃತ್ತಾಂತವನ್ನು ಅವನವನ ಉದ್ದೇಶದಲ್ಲಿ ಪರಿಶೀಲಿಸುವ ಹೊಸ ಸಂಪ್ರದಾಯ ಇಲ್ಲಿ

ಕಾಣುವುದಿಲ್ಲ. ಆದುದರಿಂದ ನಾಲ್ಕು ಸುವಾರ್ತೆಗಳಲ್ಲಿರುವ 'ಕಥೆ ಸಂಕ್ಷಿಪ್ತವಾಗಿ' ಬಂದಿದೆ, ಅಷ್ಟೆ. ಅಸಾಂಗತ್ಯಗಳನ್ನು ಪರಿಶರಿಸುವ ಯತ್ನ ನಡೆಯದಿದ್ದರೂ, ವೃತ್ತಾಂತಗಳ ಧರ್ಮದರ್ಶನಾತ್ಮಕ ಅರ್ಥವಂತಿಕೆಯನ್ನು ಹುಡುಕದಿರುವುದರಿಂದ ಅನುಕೂಲ ಅಂಶಗಳನ್ನು ಪೋಣಿಸಿ ಕಥೆ ಸಲೀಲವಾಗಿ ಹರಿಯುವಂತೆ ಏರ್ಪಡಿಸಿದ ವಾಸ್ತವಾಂಶಗಳ ರೂಪರೇಖೆಯಾಗಿ ಇಲ್ಲಿಯ ನಿರೂಪಣೆ ಪರಿಣಮಿಸಿದೆ. ಮುನ್ನುಡಿಯಷ್ಟನ್ನೇ ನೋಡಿದರೆ ಯೇಸುವಿನ ಜೀವನದ ಅರ್ಥಪೂರ್ಣತೆಯನ್ನೂ ಬೋಧನೆಯ ಸಾರವನ್ನೂ ಪೈ ಅವರು ಸಾಕಷ್ಟು ಗಮನಿಸಿದಂತೆ ತೋರದು. ಪೈ ಅವರ ದೃಷ್ಟಿಯಲ್ಲಿ ಯೇಸು ಒಬ್ಬ ಸಾಮಾನ್ಯ ಧರ್ಮೋದ್ಧಾರಕ, ಸಾಮಾನ್ಯ ನೀತಿನಿಯಮಾವಳಿಗಳ ಬಗೆಗೆ ಜಿಜ್ಞಾಸೆ ನಡೆಸಿ ಭೋಧನಾಕಾರ್ಯದಲ್ಲಿ ನಿರತನಾದವನು. ಅವನು 'ದೇವಾತ್ಮಜಾತ' (೭),[೮] 'ದೇವಕುವರ' (೯೨) ಎಂದು ಕವನದಲ್ಲಿ ಹೇಳಿದೆಯಾದರೂ ಮುನ್ನುಡಿಯಲ್ಲಿ ಆ ಮಾತು ಬರುವುದಿಲ್ಲ. ವಾಸ್ತವವಾಗಿ ಯೇಸು ದೇವರ ಪುತ್ರನೆಂಬುದು ಬಹು ಮುಖ್ಯವಾದ ವಿಷಯ. ಅವನ ಬೋಧನೆಯನ್ನು ಸ್ಥೂಲವಾಗಿ ಹೀಗೆ ಸಂಗ್ರಹಿಸಬಹುದು; ತಾನು ಅವತರಿಸಿದುದರಿಂದ ದೇವರ ರಾಜ್ಯ ಭೂಮಿಯಲ್ಲಿ ನೆಲೆಗೊಳ್ಳುವಂತಾಯಿತು, ಆದುದರಿಂದ ಪಾಪಗಳಿಗೋಸ್ಕರ ಪಶ್ಚಾತ್ತಾಪ ಪಡಲು ಇದು ಸಕಾಲ. ಪೈ ಅವರು ಹೇಳಿದಂತೆ ಯೇಸು "ಎಷ್ಟೋ ವಿಷಯಗಳನ್ನು ಕುರಿತು ಧರ್ಮೋಪದೇಶ ಮಾಡಿದನು", ನಿಜ. ಆದರೆ ಇವೆಲ್ಲ 'ವಿಷಯಗಳು' ಯೇಸುವಿನ ಒಟ್ಟು ಬೋಧನೆಯ ಜೀವನೋದ್ದೇಶದ ಶಿಲ್ಪದ ವಿವಿಧ ವಿವರಗಳಷ್ಟೆ.

ಕವನದಲ್ಲಿಯೂ

"....ಬದುಕಿರುವಂದೆ ದೇವರಲಿ
ಸಾಯುಜ್ಯವಡೆಯೆ ಪಾತಕಿ ಮನವ ನೇರ್ವಡಿಸೆ
ಧ್ಯಾನೋಪವಾಸವಲ್ಲದೆ ಬೇರೆ ಪಥವಿಲ್ಲ
ವೆಂದು ಲೋಕಕೆ ಸಾರಲದನೆ ತಾನಾಚರಿಸಿ
ಬಡವಾದನಿವನ್...." (೩೪–೩೮)

ಎಂದು ಹೇಳಿರುವಲ್ಲಿ ದೇವರೊಡನೆ ಸಾಯುಜ್ಯ ಪಡೆಯಲು ಧ್ಯಾನೋಪವಸಾಗಳೇ ದಾರಿ ಎಂಬುದು ಲೋಕಕ್ಕೆ ಸಾರುವಷ್ಟು ಮುಖ್ಯವಾದ ಮಾತೆಂಬುದಾಗಿ ಯೇಸು ಪರಿಗಣಿಸಿರಲಿಲ್ಲ. ಇದನ್ನೇ ಲೋಕಕ್ಕೆ ಸಾರಲು ಯೇಸು ತಾನಾಗಿ ಬಡವನಾದನೆಂಬ ವ್ಯಾಖ್ಯಾನಕ್ಕೆ ಮೂಲಪಾಠದಲ್ಲಿ[೪] ಆಧಾರ ಸಿಗುವುದಿಲ್ಲ. ದೇವರೊಡನೆ ಸಾಯುಜ್ಯವನ್ನು ಪಡೆಯುವ ಮಾತಾಗಲಿ, ಧ್ಯಾನೋಪವಾಸಗಳು ಇದಕ್ಕೆ ಸಾಧನಗಳೆಂದಾಗಲಿ ಈ ಪಾಠದಲ್ಲಿ ಹೇಳಿಲ್ಲ.

ಕವನದ ವಸ್ತುವಿನ ಹೆಚ್ಚಿನ ವಿವರಗಳು ಒಂದೇ ಸುವಾರ್ತೆಯಲ್ಲಿರದೆ ನಾಲ್ಕೂ ಸುವಾರ್ತೆಗಳ ಈ ಭಾಗಗಳಲ್ಲಿವೆ: ಮ್ಯಾತ್ಯು ೨೭, ೧-೩೬; ಮಾರ್ಕ್ ೧೫, ೧-೪೧; ಲೂಕ್ ೨೩, ೧-೪೯ ಮತ್ತು ಜಾನ್ ೧೮, ೨೮-೧೯, ೩೭, ಇವುಗಳಲ್ಲಿ ರಾಜಭಟರಿಂದ ಮನವಿಯನ್ನು ದೊರೆಗೆ ತಿಳಿಸುವುದು (೧೮), "ಕಾಲವದನೆ ನಿನ್ನಿಂದ ತಿರಿತಿರಿಗೆ ನುಡಿಸುವುದೈಸೆ" (೧೨೯) ಎಂದು ಯೇಸು ಪಿಲಾತನಿಗೆ ಹೇಳುವುದು, "ನಿಮ್ಮ ನೀತಿಯಿಂ ಎಮ್ಮ ಧರ್ಮವಂ ಕಾಯೆಂದು ನಿಮ್ಮೇಕಛತ್ರದೀ ನೆಳಲನೆಮಗೀಯೆಂದು" (೧೬೭-೬೯) ಯೆಹೂದ್ಯರು ಹೇಳುವುದು, ಪಿಲಾತನಿಗೆ ಕೈಸರನು ತನಗೆ ಕೊಟ್ಟ ಎಚ್ಚರಿಕೆಯ ನೆನಪಾಗುವುದು, ಯೆಹೂದ್ಯರು ತಮ್ಮ ಆಡಳಿತದಿಂದ ತಪ್ಪಿ ಹೋದರೆ ರೋಮನರ ಖ್ಯಾತಿಗೆ ಕುಂದು ಬರುವುದಿಲ್ಲವೆ ಎಂದು ವಿಶೇಷವಾದ ಸಾಮ್ರಾಜ್ಯನಿಷ್ಠೆಯನ್ನು ಪಿಲಾತ ತೋರ್ಪಡಿಸುವುದು (೨೦೦-೨೦೫), ಯೇಸು ಅಸುನೀಗಿದ ಮೇಲೆ ಕೋಳಿ ಮುಂಜಾವದಲ್ಲಿ ಕೂಗುವಂತೆ ಕೂಗುವುದು (೩೪೯-೫೦)- ಇವು ಪೈ ಅವರು ಸೇರಿಸಿದ ಅಂಶಗಳು, ಮಗ್ದಲದ ಮರಿಯ ಹೊನ್ನಂಬುಗಳಿಗೆ ಗುರುಯಾಗದವಳು, ಸುಂದರಿ, ಯೇಸುವನ್ನು ಕಂಡು ಕಡುಬಡತನವನ್ನುಟ್ಟಳು (೪೦-೬೬) ಎಂಬುದೂ ಮೂಲದಲ್ಲಿಲ್ಲ.

ಮೂಲದಲ್ಲಿರದ ಅಂಶಗಳು ಕವನಕ್ಕೆ ಸೇರಿದುದರಿಂದ ಒಂದೆರಡು ಕಡೆ ಮೂಲದ ಸ್ವರೂಪಕ್ಕೆ, ಸರಿಹೋಗದಂಥ ಬಣ್ಣ ಬಂದಿದೆ. ಕೆಲವೆಡೆ ಪಾತ್ರಗಳ ಮೂಲ ಸ್ವರೂಪಕ್ಕೆ, ತೀವ್ರ ಧಕ್ಕೆ ಉಂಟಾಗಿದೆ. ಸುವಾರ್ತೆಗಳಲ್ಲಿ ಮೂಡಿ ಬಂದ ಯೇಸು ಧೀರ, ಗಂಭೀರ ವ್ಯಕ್ತಿ, ಸ್ವಪ್ರಾಮಾಣಿಕತೆ ಅವನಲ್ಲಿ ಕ್ಷಣಕ್ಷಣಕ್ಕೂ ಎದ್ದುಕಾಣುತ್ತಿತ್ತು. ಯೇಸು ದೇವರೂ ಮನುಷ್ಯನೂ ಆಗಿದ್ದಾನೆ. ಪಾಪವೊಂದನ್ನು ಬಿಟ್ಟರೆ ಮನುಷ್ಯರಿಗೆ ಸಹಜವಾದ ಬಳಲಿಕೆ, ನಿದ್ರೆ, ವ್ಯಥೆಗಳೆಲ್ಲವನ್ನು ಅವನು ಅನುಭವಿಸಿದ್ದನು. ಬಂಧುಪ್ರೇಮ, ಮಮತೆಗಳನ್ನು ಸಂದರ್ಭೋಚಿತವಾಗಿ ತೋರ್ಪಡಿಸಿದ್ದನು. ಕವನದಲ್ಲಿ ಯೇಸುವಿನ ಧೀರ ಗಾಂಭೀರ್ಯಕ್ಕೆ ಸ್ವಲ್ಪ ಚ್ಯುತಿ ಉಂಟಾಗಿದೆ ಎನಿಸುತ್ತದೆ.

**".......ಹೆಣ್ಣಗೆಯ**
**ನಯನದಿ ಭವಿಷ್ಯವಂ ತಿವಿದ ಪುರುಷನ ದೃಷ್ಟಿ,**
**ಹೆಣ್ಣೆದೆಯ ಮಾರ್ದವದಿ ಗಂಡಿನ ಮನೋದಾರ್ಢ್ಯ" (೭೪-೭೬)**

ಇಲ್ಲಿರುವ "ಹೆಣ್ಣಗೆ", "ಹೆಣ್ಣೆದೆಯ ಮಾರ್ದವ"ಗಳು ಮೂಲ ವ್ಯಕ್ತಿತ್ವವನ್ನು ಹೆಚ್ಚು ಪ್ರಕಾಶಿಸಲು ಸಹಕಾರಿಯಾದ ಪದಗಳಲ್ಲ. ತನ್ನ ಪ್ರೀತಿಯ ಸ್ನೇಹಿತ ಲಾಜರಸ್ ಸತ್ತಾಗ ಯೇಸು

ಕಂಬನಿಗರೆದಿದ್ದನು,[೫] ಅಷ್ಟು ಹೃದಯ ಮಾರ್ದವ ಅವನಲ್ಲಿತ್ತು; ತಾನು ಮರಣಯಾತನೆಯನ್ನು ಸಹಿಸುತ್ತಿರುವಾಗಲೇ ತನ್ನ ತಾಯಿಯ ಯೋಗಕ್ಷೇಮವನ್ನು ವ್ಯವಸ್ಥೆಗೊಳಿಸುವಂತೆ ಶಿಷ್ಯನಿಗೆ ಹೇಳುವಷ್ಟು ಪ್ರೀತಿ ಅವನಲ್ಲಿತ್ತು;[೬] ಜೆರೂಜಲೇಮಿನ ಸ್ತ್ರೀಯರು ಪಡಬೇಕಾದ ಸಂಕಟಗಳನ್ನು ನೆನೆದು, ತನ್ನ ಸಂಕಟಗಳನ್ನು ಮರೆಯುವಷ್ಟು ಹಿರಿಮೆ ಅವನಲ್ಲಿತ್ತು.[೭] ಆದರೆ ಈ ಗುಣಗಳನ್ನು "ಹೆಣ್ಣಿಗೆ" "ಹೆಣ್ಣೆದೆಯ ಮಾರ್ದವ" ಎಂದು ನಿರ್ದೇಶಿಸುವುದು ಯೇಸುವಿನ ಒಟ್ಟು ವ್ಯಕ್ತಿತ್ವಕ್ಕೆ ಹೊಂದಿಕೊಳ್ಳುವುದಿಲ್ಲ.

ಇದೇ ಸಂದರ್ಭದಲ್ಲಿ ಕವನದ ಇನ್ನೊಂದು ಪ್ರಯೋಗವನ್ನು ಗಮನಿಸಬಹುದು:

"....ಮನಸ್ಸಾಕ್ಷಿಯಂತಿನಿದಾಗಿ
ನೀನದನೆ ನುಡಿದೆಂದು ಯೇಸು ಕಿರುನುಡಿದಂ" (೧೨೨–೨೩)

ಇಲ್ಲಿಯ 'ಇನಿದಾಗಿ' 'ಕಿರುನುಡಿದಂ' ಪ್ರಯೋಗಗಳು ಸಂದರ್ಭಕ್ಕೆ ಸರಿಬೀಳದಂಥವು. ಹಿಂದಿನ ಸಂಜೆ ಅಸಾಮಾನ್ಯ ಮಾನಸಿಕ ವೇದನೆಯನ್ನು ಸಹಿಸಿ, ರಾತ್ರಿಯೆಲ್ಲಾ ಸೇವಕರ ಮೂದಲಿಕೆಯನ್ನು ಮತ್ತು ತನ್ನ ಶಿಷ್ಯರು ತನ್ನನ್ನು ಕೈಬಿಟ್ಟ ನೋವನ್ನು ಅನುಭವಿಸಿದರೂ ಯೇಸುವಿನ ವ್ಯಕ್ತಿತ್ವದಲ್ಲಿ ದುರ್ಬಲತೆ ಕಾಣಿಸಿಕೊಂಡಿರುವ ಸೂಚನೆ ಸುವಾರ್ತೆಗಳಲ್ಲಿ ಎಲ್ಲಿಯೂ ಸಿಗುವುದಿಲ್ಲ. ಏನಿದ್ದರೂ

".....ಕಾಲವದನೆ ನಿನ್ನಿಂದ ತಿರಿ
ತಿರಿಗಿ ನುಡಿಸುವುದ್ಯೆಸೆ? ನನ್ನ ರಾಜತೆಗೊಂದೆ
ಸತ್ಯವನಿತರ ಸಾಕ್ಷಿ ! ಸತ್ಯವೆನ್ನಯ ರಾಜ್ಯ !
ಸತ್ಯವನ್ನೀಡೇರಿಸುವ ರಾಜನಾಂ ಗಡಾ !" (೧೨೯–೩೨)

ಎಂಬಲ್ಲಿ ಕಾಣಸಿಗುವ ನಿರಾಡಂಬರ ದಿಟ್ಟತನ ಯೇಸುವಿನ ಸ್ವಭಾವದ ಸರಿಯಾದ ಚಿತ್ರ. ಈ ದೃಷ್ಟಿಯಲ್ಲಿ "ಇನಿದಾಗಿ" "ಕಿರುನುಡಿದಂ" ಎರಡೂ ಪದಗಳು ಅನುಚಿತವಾಗುತ್ತವೆ. "ಕಿರುನುಡಿ" ಪದ ಆತ್ಮಪ್ರತ್ಯಯ ಕುಂದುವ ಸೂಚನೆ ಕೊಡುತ್ತದೆ; "ಇನಿದಾದ" ಮಾತುಗಳಿಗೆ ಇಲ್ಲಿಯ, ಒಟ್ಟಾರೆ ಉಗ್ರವೆನಬಹುದಾದ, ಸಂದರ್ಭದಲ್ಲಿ ಅವಕಾಶವಿಲ್ಲ.

ಯೆಹೂದ್ಯರು ಯೇಸುವನ್ನು ಪ್ರಜ್ಞಾಪೂರ್ವಕವಾಗಿ ದ್ವೇಷಿಸುತ್ತಿರಲಿಲ್ಲ. ಇದೇ ಜನರು ಹಿಂದಿನ ಭಾನುವಾರ ಯೇಸುವನ್ನು ವಿಜೃಂಭಣೆಯಿಂದ ಜೆರೂಜಲೇಮ್ ನಗರದೊಳಗೆ ಬರಮಾಡಿದ್ದರು. ಯೇಸುವಿನ ಮರಣವನ್ನು ಇವರು ಇಷ್ಟಪಟ್ಟಿದ್ದು ಸಮೂಹಭ್ರಾಂತಿಯ ದೋಷ. ಯಾಜಕರು ಹೇಳಿಕೊಟ್ಟದ್ದಷ್ಟನ್ನು ಪುನರುಚ್ಚಿಸುತ್ತಿದ್ದ ಇವರು 'ಸಂತೋಷದಿಂದ' (೨೬) ಆರ್ಭಟಿಸಿದರು ಎಂಬುದು ಅಷ್ಟು ಸಮಂಜಸವಾಗುವುದಿಲ್ಲ. ತಾವು ಇಷ್ಟಪಟ್ಟು ಕೇಳುತ್ತಿರುವುದನ್ನು

ಅಷ್ಟೊಂದು ಗಟ್ಟಿಯಾಗಿ ಪಿಲಾತನ ಕಿವಿಗೆ ಮುಟ್ಟಿಸುತ್ತಿದ್ದೇವೆ ಎಂಬ ಸಂತೋಷವಿದಲ್ಲ. ಯಾರೋ ಹೇಳಿದ್ದನ್ನು ಏಕೋ ಪುನರುಚ್ಚರಿಸುವ ಬಾಲಿಶ ಕೇಕೆ ಇದ್ದಿರಬಹುದು. ಇದಕ್ಕಿಂತ ಹೆಚ್ಚಾಗಿ, ಯೆಹೂದ್ಯರು ರೋಮನರ ಬಗೆಗೆ ತೋರಿಸುವ ಅತಿ ವಿನಮ್ರತೆಯ ಭಾವ ಆಧಾರ ರಹಿತವಾದದ್ದು:

**"ನಿಮ್ಮ ನೀತಿಯಿನೆಮ್ಮ ಧರ್ಮವಂ ಕಾಯೆಂದು,**

**ನಿಮ್ಮೇಕ ಛತ್ರದೀ ನೆಳಲನೆಮಗೀಯೆಂದು" (೧೬೭–೬೮)**

**"ನಿನ್ನ ಜೋಕೆಯನೆ ಮುಂಗಾದುಕೊಳು ಜೀಯಾ" (೧೬೭)**

ರೋಮನರ ಅಧಿಕಾರವನ್ನು ವಿಧಿ ಇಲ್ಲದೆ ಸಹಿಸುತ್ತಿದ್ದ ಯೆಹೂದ್ಯರು, ರೋಮನರನ್ನು ಮಾತ್ರವಲ್ಲ, ರೋಮನರ ಪರವಾಗಿ ತೆರಿಗೆ ವಸೂಲಿ ಮಾಡುವವರನ್ನು ಪಾಪಿಗಳೆಂದು ಪರಿಗಣಿಸುತ್ತಿದ್ದರು.[೮] ಯೆಹೂದ್ಯರ ಸನ್ಹೆದ್ರಿನ್ ಸಭೆಗೆ ಮರಣದಂಡನೆಯನ್ನು ವಿಧಿಸುವ ಅಧಿಕಾರವಿತ್ತು. ಆದರೆ ರೋಮನರು ಬಂದ ಮೇಲೆ ಆ ಅಧಿಕಾರವನ್ನು ತಮ್ಮಲ್ಲಿಯೇ ಕಾದಿರಿಸಿಕೊಂಡರು. ಆದುದರಿಂದ ಮರಣದಂಡನೆಯನ್ನು ವಿಧಿಸಬೇಕಿದ್ದರೆ, ಪಿಲಾತನೊಬ್ಬನಿಂದಲೇ ಅದು ಸಾಧ್ಯವಿತ್ತು. ಈ ಅನಿವಾರ್ಯದಿಂದಾಗಿ ಒಲ್ಲದ ಮನಸ್ಸಿನಿಂದ ಅವನನ್ನು ಯಾಚಿಸಿದರಲ್ಲದೆ ಅವರ ಬಗೆಗೆ, ಅವನ ಹಿತದ ಬಗೆಗೆ, ಅವನು ಪ್ರತಿನಿಧಿಸುವ ಅಧಿಕಾರದ ಬಗೆಗೆ ಅವರು ಯಾವ ಗೌರವವನ್ನೂ ತಳೆದಿರಲಿಲ್ಲ. ಅನ್ಯಧರ್ಮಗಳನ್ನೂ ಅನ್ಯಜನರನ್ನೂ ಅಗೌರವದಿಂದ ಕಾಣುವ ಯೆಹೂದ್ಯರು, ತಮ್ಮ ಸ್ವಂತ ಉದ್ದೇಶಗಳಿಗೋಸ್ಕರ ಪಿಲಾತನ ಅಧಿಕಾರದ ಮಂಜೂರಾತಿಯನ್ನು ಕೇಳಿದರಲ್ಲದೆ, ಈ "ಜಂಟೈಲ್"–ಧರ್ಮಬಾಹಿರ–ಜನರ ಕಾನೂನು ತಮ್ಮ ಪವಿತ್ರವಾದ ಧರ್ಮವನ್ನು ಕಾಯುವ ಸಾಮರ್ಥ್ಯ ಪಡೆದಿದೆ ಎಂಬ ಕಲ್ಪನೆಯಿಂದಲ್ಲ.

ಯೇಸುವನ್ನು ಪ್ರಶ್ನಿಸುವಾಗ ಪಿಲಾತ "ನಕ್ಕು ಸತ್ಯವೆಂದೆಯ" (೧೩೩–೩೪) ಎಂದು ಕೇಳಿದನೆಂದಿದೆ. ಅಪರಾಧಿಯನ್ನು ದಂಡಿಸಿದರೂ ಕಷ್ಟ, ಬಿಟ್ಟರೂ ಕಷ್ಟ ಎಂಬ ಪೇಚಿಗೊಳಗಾದವನು, ಯೇಸುವಿನ ಮಾತುಗಳನ್ನು ಸದ್ಯ ಅರ್ಥಮಾಡಿಕೊಂಡು ಮೊಕದ್ದಮೆಯನ್ನು ಇತ್ಯರ್ಥಮಾಡಲು ಆತುರನಾಗಿದ್ದರೂ, ಆ ವಿಚಿತ್ರ ಮಾತುಗಳನ್ನು ಅರ್ಥಮಾಡಿಕೊಳ್ಳಲಾಗದೆ ಚಡಪಡಿಸುತ್ತಿದ್ದವನು ಪ್ರಶ್ನೆಯನ್ನು ಕೇಳುವಾಗ ನಗುವ ಸ್ಥಿತಿಯಲ್ಲಿದ್ದನು ಎಂದು ನಂಬುವುದು ಕಷ್ಟವಾಗುತ್ತದೆ.[೯] ಸುವಾರ್ತೆಗಳು ಚಿತ್ರಿಸಿದ ಪಿಲಾತ ಒಬ್ಬ ಅಸಮರ್ಥ ಆಡಳಿತಗಾರ. ಎಲ್ಲಿ ತನ್ನ ಕೆಲಸ ಹೋಗುವುದೋ ಎಂದು ಭಯದಿಂದ ನಡುಗುತ್ತಿದ್ದವನು ಸಾಮ್ರಾಜ್ಯದ ಕೀರ್ತಿಯ ಬಗೆಗೆ ಕಳಕಳಿಯನ್ನು ವಹಿಸಿದ್ದಿರುವುದು ಅಸಂಭವ.

ಅದರಲ್ಲೂ ತಾನು ಸೀಜರನ ಮಿತ್ರನಲ್ಲ ಎಂದು ಜನರಿಂದ ಅನಿಸಿಕೊಂಡದ್ದೇ ಯೇಸುವಿಗೆ ಮರಣದಂಡನೆ ವಿಧಿಸಿದ ವ್ಯಕ್ತಿ ಈತ.೧೦ ಹೀಗಿರುವಾಗ,

"......ಮೇಣಿದುವೆ ನವಗೆಯ್ದಿವರು
ನಮ್ಮ ನೊಗದಿಂ ತಮ್ಮ ಬಿಡುಗಡೆಗೆ ಹೆಣಗಾಡೆ
ನನ್ನೊಡೆತನದೊಳೀ ಯೆಹೂದ್ಯವಿಂತಕಟೆಮ್ಮ
ಕೆಯ್ಯೊಳಗೆ, ರೋಮಸಾಮ್ರಾಜ್ಯದ ಜಗನ್ಮಹಿಮೆ
ಎಲ್ಲಿ? ರೋಮಿಯರೆ ಜಗಜ್ಜೇತರೆಂಬ ಪೆಂ
ಪೆಲ್ಲಿ? ರೋಮಿಯರಾಳಲು ಹುಟ್ಟಿದವರೆಂಬ
ನಮ್ಮ ಜಾತ್ಯಭಿಮಾನವೆಲ್ಲಿ? ನಮ್ಮಿತಿಹಾಸ
ದೊಳಗೆನ್ನ ಹೆಸರನುಸುರುವರೆಂತು?...." (೧೯೮–೨೦೩)

ಈ ಯೋಚನೆಗಳನ್ನು ಪಿಲಾತನಿಗೆ ಆರೋಪಿಸಿದುದರ ಔಚಿತ್ಯ ಪ್ರಶ್ನಾರ್ಹವಗುತ್ತದೆ. ತನ್ನ ಹೆಸರಿಗೆ ಅಪಖ್ಯಾತಿ ಬರುವ ಮಾತು ಹಾಗಿರಲಿ, ಕೂಡಲೆ ತನ್ನನ್ನು ಸೀಜರನು "ಮರಳೆಂದಡಕಟೆನ್ನ ಪಾಡೇನು?" (೨೦೯) ಎಂಬ ದಿಗ್ಭ್ರಮೆಯೇ ಪಿಲಾತನ ವರ್ತನೆಯನ್ನು ನಿಯಂತ್ರಿಸುತ್ತಿತ್ತು ಎಂಬುದು ಇತಿಹಾಸದಿಂದ ಸ್ಪಷ್ಟವಾಗುತ್ತದೆ.

ಮಗ್ದಲಳ ಮರಿಯಳ ಪ್ರಸಂಗದಲ್ಲಿಯೂ ಮೂಲಕ್ಕೆ ವ್ಯತಿರಿಕ್ತವಾದ ಅಂಶಗಳಿವೆ. ಯೇಸುವಿನ ಅನುಯಾಯಿಗಳಲ್ಲಿ ಹೆಂಗಸರೂ ಇರುತ್ತಿದ್ದರು. ಇವರ ಪೈಕಿ ಮಗ್ದಲದ ಮರಿಯಳ ಹೆಸರನ್ನು ಲೂಕ್ ಹೇಳುತ್ತಾನೆ.[೧೧] ಯಾವುದೋ ಭೀಕರ ಕಾಯಿಲೆಯಿಂದ ನರಳುತ್ತಿದ್ದ ಇವಳನ್ನು ಯೇಸು ಗುಣಪಡಿಸಿದ್ದನು. ಯೇಸು ಸಾಯುವ ಸಂದರ್ಭದಲ್ಲಿ ಇವಳೂ ಶಿಲುಬೆಯ ಸಮೀಪ ಉಪಸ್ಥಿತಳಿದ್ದಳು. ಲೂಕನ ಸುವಾರ್ತೆಯಲ್ಲಿ ಪಾಪಿಷ್ಠೆಯಾದ ಸ್ತ್ರೀಯೊಬ್ಬಳ ವೃತ್ತಾಂತ ಬಂದಿದೆ.[೧೨] ಸಿಮೋನ ಎಂಬ ಫರಿಸಾಯನ ಮನೆಯಲ್ಲಿ ಏರ್ಪಡಿಸಿದ್ದ ಔತಣ ಕೂಟದಲ್ಲಿ ಭಾಗವಹಿಸುತ್ತಿದ್ದ ಯೇಸುವನ್ನು ಇವಳು, ತಾನು ಮನೆಯವಳಲ್ಲದಿದ್ದರೂ, ಅತ್ಯಂತ ಪ್ರೀತಿ ಆದರಗಳಿಂದ ಉಪಚರಿಸಿದ್ದಳು. ಆಗ ಅವಳ ಪಾಪಗಳನ್ನು ಯೇಸು ಕ್ಷಮಿಸಿದನು. ಅನುಮಾನಾಸ್ಪದಶೀಲದ ಈ ಹೆಣ್ಣಿನ ಉಪಚಾರವನ್ನು ಯೇಸು ಸ್ವೀಕರಿಸಿದುದು ಅತಿಥೇಯನಿಗೆ ಅರ್ಥವಾಗಲಿಲ್ಲ. ಆಗ ಒಂದು ಸಾಮ್ಯದ ಮೂಲಕ ತನ್ನ ವರ್ತನೆಯನ್ನು ಸಮರ್ಥಿಸಿಕೊಂಡ ಯೇಸು, ಸುವಾರ್ತೆ ಪ್ರಚಾರವಾಗುವ ಎಲ್ಲೆಡೆಗಳಲ್ಲಿಯೂ ಇವಳ ವೃತ್ತಾಂತ ಪ್ರಸಿದ್ಧಿಯಾಗುವುದು ಎಂದನು.[೧೩] ಈ ವೃತ್ತಾಂತದ ಸ್ತ್ರೀಯ ಹೆಸರು ಮೇರಿ (ಮರಿಯ) ಎಂದು ಒಂದೆಡೆ[೧೪] ಹೇಳಿದ್ದರೂ ಮತ್ತು ಇವಳೂ ಮಗ್ದಲದ ಮರಿಯ ಎಂಬವಳೂ ಒಂದೇ ವ್ಯಕ್ತಿ ಎಂಬ ಸಂಪ್ರದಾಯ ಪಾಶ್ಚಾತ್ಯದಲ್ಲಿದ್ದರೂ ಇವರಿಬ್ಬರು, ಸಂಪೂರ್ಣವಾಗಿ

ಬೇರೆ ಬೇರೆ ವ್ಯಕ್ತಿಗಳು.[೧೫] ಪೈ ಅವರು ಇವರಡು ಕಥೆಗಳನ್ನು ಒಂದುಗೂಡಿಸಿದ್ದಾರೆ ಮಾತ್ರವಲ್ಲ ಮರಿಯಳ ಸೌಂದರ್ಯವನ್ನು ವಿಸ್ತಾರವಾಗಿ ವರ್ಣಿಸಿದ್ದಾರೆ. ಮಗ್ದಲದ ಮರಿಯಳಿಗೆ ನಿಜವಾಗಿಯೂ ಯೇಸುವಿನ ಮೇಲೆ ಪ್ರೀತಿಯಿತ್ತು; ಅವಳು ಶಿಲುಬೆಯ ಬಳಿ ಇದ್ದಳೆಂಬುದೂ ನಿಜ. ಆದರೆ ಅವಳು ಬಡತನವನ್ನಪ್ಪಿದಳೆಂಬುದು ಎರಡೂ ಕಥೆಗಳಲ್ಲಿ ಸಿಗದ ಅಂಶ. ವಾಸ್ತವವಾಗಿ ಅವಳು ಸ್ಥಿತಿವಂತಳಾಗಿದ್ದಳೆಂಬುದೇ ಮೂಲದ ಅಭಿಪ್ರಾಯ.[೧೬]

ಮೂಲವಸ್ತುವಿಗೂ ಕವನದಲ್ಲಿ ಅದನ್ನು ನಿರ್ವಹಿಸಿದ ರೀತಿಗೂ ಇದ್ದ ಈ ವ್ಯತ್ಯಾಸಗಳು ಕವನದ ಸಾರ್ಥಕತೆಯು ಮೇಲೆ ಋಣಾತ್ಮಕ ಪರಿಣಾಮವನ್ನು ಉಂಟು ಮಾಡುತ್ತವೆಯಾದರೂ ಕವನದ ಒಟ್ಟು ನಿವೇದನೆಯನ್ನು ಅವು ಅಲ್ಲಗಳೆಯುವುದಿಲ್ಲ, ನಿವೇದನೆಯ ಪರಿಪೂರ್ಣತೆಗೆ ಕುಂದನ್ನು ತಂದೊಡ್ಡುತ್ತವೆಯಷ್ಟೆ.

ಸುವಾರ್ತೆಗಳ ಕಥನದಲ್ಲಿ ಹಾಗು ಕ್ರೈಸ್ತ ಭಕ್ತಿ ಸಂಪ್ರದಾಯದಲ್ಲಿ ಯೇಸುವಿನ ಕೊನೆಯ ದಿನ ಒಂದು ಸ್ವತಂತ್ರವಾದ ಘಟಕವಾಗಿ ನಿಲ್ಲುವುದಿಲ್ಲ. ಯೇಸುವಿನ ಪಾಡುಗಳು, ಸಾವು ಮತ್ತು ಪುನರುತ್ಥಾನ ಎಂದು ಯೇಸುವಿನ ಕೊನೆಯ ದಿನಗಳನ್ನು ಸಾಮಾನ್ಯವಾಗಿ ಒಟ್ಟಿಗೆ ನಿರ್ದೇಶಿಸುವುದು ರೂಢಿ. ಇದು ಕಾಲಚಕ್ರದ ಅನುಕೂಲದ ನಿರ್ದೇಶನ ಮಾತ್ರವಲ್ಲ, ಧರ್ಮದರ್ಶನದ ದೃಷ್ಟಿಯಲ್ಲಿಯೂ ಮಹತ್ವವನ್ನು ಪಡೆದಿರುವ ನಿರ್ದೇಶನ. ತನ್ನ ಜೀವನೋದ್ದೇಶವನ್ನು ಅಂತಿಮವಾಗಿ ಮತ್ತು ನಿರ್ಣಾಯಕವಾಗಿ ಯೇಸು ಪರಿಪೂರ್ಣಗೊಳಿಸಿದುದು ಈ ಅವಧಿಯಲ್ಲಿ; ಪಾಪದ ಅನಿಷ್ಟ ಶಕ್ತಿಗಳನ್ನು ಕೊನೆಯ ಬಾರಿಗೆ ಮತ್ತು ತೀವ್ರತಮವಾಗಿ ಅವನು ಎದುರಿಸಿದುದು ಈ ದಿನಗಳಲ್ಲಿ. ಯೇಸು ಅನುಭವಿಸಿದ ಘೋರ ಯಾತನೆಗಳು ಈ ಶಕ್ತಿಗಳ ಕರಾಳ ಹಾಗೂ ನಿಜ ಸ್ವರೂಪವನ್ನು ಬಹಿರಂಗಗೊಳಿಸಿದವು. ಇಂಥ ಸಂಕಟಗಳನ್ನು ಅನುಭವಿಸಬೇಕಾದರೂ ಸಾವನ್ನೇ ಅಪ್ಪಿಕೊಳ್ಳಬೇಕಾದರೂ ಪಿತನಾದ ದೇವರಿಗೆ ವಿಧೇಯನಾಗಿರುವುದು ಯೇಸುವಿನ ಜೀವನದ ಮುಖ್ಯ ಉದ್ದೇಶವಾಗಿತ್ತು.[೧೭] ಯೇಸುವಿನ ಪುನರುತ್ಥಾನ ಈ ಘಟಣಾವಳಿಯ ಕೊನೆಯ ಭಾಗ. ತಾನು ಸತ್ತರೂ ಪಾಪವನ್ನು ಮತ್ತು ಅದರ ಪರಿಣಾಮವಾದ ಸಾವನ್ನು ಗೆದ್ದು ಯೇಸು ವಿಜಯಿಯಾದುದು ಪುನರತ್ಥಾನದಿಂದ, ಸತ್ತ ಯೇಸು ಮತ್ತು ಎದ್ದಿರದಿದ್ದರೆ ತನ್ನ ಉಪದೇಶವೆಲ್ಲ ವ್ಯರ್ಥವಾಗುತ್ತಿತ್ತು ಎಂದು ಸೇಂಟ್ ಪೌಲ್ ಹೇಳಿದುದು[೧೮] ಕ್ರೈಸ್ತ ಧರ್ಮದರ್ಶನದಲ್ಲಿ ಪುನರುತ್ಥಾನ ಎಷ್ಟು ಕೇಂದ್ರೀಯವೆಂಬುದನ್ನು ತೋರಿಸುತ್ತದೆ.

'ಗೊಲ್ಗೊಥಾ' ಕವನ ಯೇಸುವಿನ ಕೊನೆಯ ದಿನದ, ಎಂದರೆ ಸಾಮಾನ್ಯವಾಗಿ ಗುಡ್‌ಫ್ರೈಡೆ ಎಂದು ಪರಿಚಿತವಾಗಿರುವ ಶುಕ್ರವಾರದ, ವೃತ್ತಾಂತವನ್ನು ಒಳಗೊಂಡಿದೆ. ಇದರ ಹಿಂದಿನ ದಿನ ಯೇಸು ಕೊನೆಯ ಭೋಜನವನ್ನುಂಡು, ಗೆತ್ಸೆಮನಿ ತೋಪಿನಲ್ಲಿ ಪರಿಪರಿಯಾಗಿ ನರಳಿದುದು, ಯಾಜಕರ ಕಡೆಯವರು ಅವನನ್ನು ಬಂಧಿಸಿದುದು, ಕಾಯಫಸ ಯೇಸುವನ್ನು ವಿಚಾರಣೆಗೆ ಗುರಿಪಡಿಸಿದುದು, ಶಿಷ್ಯ ಪೇತ್ರ ಮೂರುಬಾರಿ ಯೇಸುವನ್ನು ಅಲ್ಲಗಳೆದು ವಿಶ್ವಾಸಘಾತಕನಾದುದು, ಯಾಜಕರ ಸೇವಕರು ಮತ್ತಿತರರು ಬಂಧಿಯನ್ನು ಗೇಲಿಮಾಡಿದುದು, ಹಿಂಸಿಸಿದುದು... ಇಷ್ಟೆಲ್ಲ ಘಟನೆಗಳು ನಡೆದಿದ್ದವು. ಕವನದಲ್ಲಿ ಕಾಯಫನ ವಿಚಾರಣೆಯ ಮಾತೊಂದನ್ನು ಬಿಟ್ಟರೆ, ಮಿಕ್ಕ ಘಟನೆಗಳ ಮಾತು ಬರುವುದಿಲ್ಲ, ಆದರೂ

> **"ಕೋಳಿ ಮೂರನೆಯ ಬಾರಿ ಕೂಗಿ ಯೇಸುವ ಕೊಲ್ಲ**
> **ಲೆಳಸಿದ ಯೆಹೂದ್ಯರ ಮನಸ್ಸಾಕ್ಷಿಯೊಲು ಸುಮ್ಮ**
> **ನಾಗೆ" (೧–೩)**

ಈ ಪಂಕ್ತಿಗಳು ಕುತೂಹಲವನ್ನು ಕೆರಳಿಸುತ್ತವೆ. "ಕೋಳಿ ಎರಡು ಬಾರಿ ಕೂಗುವ ಮೊದಲು ನೀನು ನನ್ನನ್ನು ಮೂರು ಬಾರಿ ಅಲ್ಲಗಳೆಯುವಿ," ಎಂದು ಪೇತ್ರನಿಗೆ ಯೇಸು ಎಚ್ಚರಿಗೆ ನೀಡಿದ್ದನು. ಆದರೆ ತನ್ನ ಸ್ವಾಮಿನಿಷ್ಠೆಯ ಬಗೆಗೆ ಜಂಭ ಕೊಚ್ಚಿಕೊಂಡ ಪೇತ್ರ, ಅನಂತರ, ಸ್ವಾಮಿಯನ್ನು ಮೇಲಿಂದ ಮೇಲೆ ಮೂರು ಬಾರಿ ಅಲ್ಲಗಳೆದಿದ್ದನು; ಆಗ ಕೋಳಿ ಕೂಗಿತ್ತು. ವಿಚಾರಣೆಗೆ ನಿಲ್ಲಿಸಿದ ಯೇಸು ಪೇತ್ರನನ್ನು ನೋಡಿದನು. ಪೇತ್ರನಿಗೆ ತನ್ನ ತಪ್ಪಿನ ಅರಿವಾಗಿ, ಹೊರಗೆ ಹೋಗಿ ಅತ್ತನು.[೯] ಪಾಡುಗಳ ಪ್ರಸಂಗದಲ್ಲಿ ಕೋಳಿ ಕೂಗುವ ಉಲ್ಲೇಖ ಇಂದೊಂದೇ. ಕವನದಲ್ಲಿ ಹೇಳಿರುವ ಸಂದರ್ಭಕ್ಕೆ ಸಂವಾದಿಯಾದ ಸಂದರ್ಭದಲ್ಲಿ ಕೋಳಿ ಕೂಗಿತೆಂದು ಮೂಲದಲ್ಲಿ ಹೇಳಿಲ್ಲ. ಆದರೆ "ಕೋಳಿ ಮೂರನೆಯ ಬಾರಿ ಕೂಗಿ", ಎಂದು ಕವನದಲ್ಲಿ ಹೇಳಿದುದು ಪೇತ್ರನ ಅಪರಾಧವನ್ನೂ, ಆ ಅಪರಾಧ ಪಡೆದ ಕ್ಷಮೆಯನ್ನೂ ಸ್ಪಷ್ಟವಾಗಿ ಧ್ವನಿಸುತ್ತದೆ.

ಕೋಳಿ ಕೂಗಿದ ಘಟನೆಯಿಂದ ಓದುಗರ ಗಮನ ಗಮನ ಹಿಂದಿನ ದಿನದ ಘಟನಾವಳಿಗಳತ್ತ ಹೊರಳುತ್ತದೆ. ಈ ಸಂದರ್ಭದಲ್ಲಿ

> **"....ನೇಸರಂ ಸೆರೆಬಿಗಿದು ರಾತ್ರಿಗೊ**
> **ಪ್ಪಿಸುವ ಮೋಡದ ಗಡಣದಂತೆ ಕೈಸೆರೆವಿಡಿದ**
> **ಯೇಸುವಂ" (೧೨–೧೪)**

ಎಂದಿರುವುದು ಶುಕ್ರವಾರದ ವರ್ಣನೆಗಿಂತಲೂ ಹಿಂದಣ ರಾತ್ರಿ, ಬೆಳದಿಂಗಳಿದ್ದರೂ ಗೆತ್ಸೆಮನಿ ತೋಪಿನ ಮರಗಳು ಚಾಚಿದ್ದ ಉದ್ದನೆಯ ನೆರಳುಗಳ ಮಬ್ಬಿನಲ್ಲಿ, ಯಾಜಕರ ಸೇವಕರು ಸುಸಂಸ್ಕೃತ ಮೂರ್ತಿಯಾಗಿದ್ದ ಯೇಸುವನ್ನು ಹಿಡಿದುಕೊಂಡು ಹೋಗುವ ಚಿತ್ರವನ್ನು ಬಲವಾಗಿ ಜ್ಞಾಪಕಕ್ಕೆ ತರುತ್ತದೆ. ಹೀಗೆ ಈ ಪಂಕ್ತಿಗಳು ಸಹ ಕವನದ ವಸ್ತುವಿಗೆ ಧರ್ಮದರ್ಶನದ ಹಾಗೂ ಭಾವನಾತ್ಮಕ ಸಮಗ್ರತೆಯನ್ನು ನೀಡುವ ಒಂದು ಪ್ರಯತ್ನವಾಗುತ್ತವೆ. ಪುನರುತ್ಥಾನದ ಮಾತು ಸ್ಪಷ್ಟವಾಗಿ ಕವನದಲ್ಲಿ ಬಂದಿದ್ದರೆ ಈ ಸಮಗ್ರತೆ ಪರಿಪೂರ್ಣವಾಗುತ್ತಿತ್ತು.

ಯೇಸುವಿನ ಕೊನೆಯ ದಿನವು ವಸ್ತುವಾಗಿದ್ದ ಕವನದಲ್ಲಿ ಪುನರುತ್ಥಾನದ ಮಾತನ್ನು ನಿರೀಕ್ಷಿಸಬಾರದು, ನಿಜ. ಆದರೆ ಪುನರುತ್ಥಾನದ ನೆರಳು ಯೇಸುವಿನ ಕೊನೆಯ ದಿನದ ಮೇಲೆ ಬಿದ್ದಿರುವುದನ್ನು ಸುವಾರ್ತೆಗಳಲ್ಲಿ ಕಾಣಬಹುದು. ಸುವಾರ್ತೆಯ ವೃತ್ತಾಂತಗಳಲ್ಲಿ ಶಿಲುಬೆಯ ಮೇಲಿನ ಮರಣದ ದಾರುಣ ವಾಸ್ತವತೆ ಇದೆ, ಆದರೆ ಅದೇ ಅಂತಿಮ ಎಂಬ ಭಾವನೆ ಇಲ್ಲ. ಅದರೆ ಕವನದಲ್ಲಿ,

"......ತುದಿಬೆಟ್ಟ
ದಿಂ ಕರೆವ ತಾಯೆಡೆಗೆ ಮರಿಜಿಂಕೆ ಜಿಗಿವಂತೆ,
ಸುಗ್ಗಿಯೆಡೆಗೆಯ್ದುವಾ ಬಾನಕ್ಕಿಯಂತೆ...." ( ೩೩೨–೩೪)

"....ತಾಯ ಮೊಗ
ನೋಡೆ ಮಗು ಬೆಸಲಳಲನೋತು ಸೈರಿಸುವಂತೆ" (೨೯೭–೯೮)

ಈ ಪಂಕ್ತಿಗಳು ಮೂಡಿಸುವ ಬಿಡುಗಡೆಯ ಭಾವನೆ ಯೇಸುವಿನ ದೈಹಿಕ, ಮಾನಸಿಕ ಹೋರಾಟಗಳಿಗೆ ಸಂಕಷ್ಟಗಳಿಗೆ ಒಂದು ನಿಲುಗಡೆ ಮತ್ತು ಅಂತಿಮತೆಯನ್ನು ಕೊಡುತ್ತವೆ.

"...ಯೇ
ಸುವಿನಾತ್ಮವೊಡನೆ ಬೆಳಕಿನ ಬೀಡಿಗಯ್ದೆ, ನಿಲು
ನೇಸರುಗಳೆಡೆಗಯ್ದೆ,...... (೩೩೬–೩೮)

ಎಂಬಲ್ಲಿ "ನಿಲುನೇಸರುಗಳು" "ಬೆಳಕಿನ ಬೀಡು"–ಈ ಸ್ಥಾವರ ಕಲ್ಪನೆಗಳು ಕಥಾನಕ ಮುಂದುವರಿಯುವ ನಿರೀಕ್ಷೆಯನ್ನು ಅದುಮಿಬಿಡುತ್ತವೆ.

ಹೀಗಿದ್ದರೂ, ಈ ಸ್ಥಿತಿಯಿಂದ ಕವನ ಎದ್ದು ನಿಲ್ಲುವುದನ್ನು ಎರಡು ಕಡೆಗಳಲ್ಲಿ ನೋಡಬಹುದು:

"ಮನೆಗೆ ತೆರಳಿದರಲ್ಲಿ ಸದ್ದಿಲ್ಲ, ಸುಳಿವಿಲ್ಲ." (೩೫೯)

"ಎತ್ತಲು ನಿಷ್ಪಂದಮೆತ್ತಲುಂ ಶಾಂತಂ" (೩೭೭)

ಇವುಗಳಲ್ಲಿ ಎರಡನೆಯದು ಕವನದ ಕೊನೆಯ ಪಂಕ್ತಿ. 'ಸದ್ದಿಲ್ಲ ಸುಳಿವಿಲ್ಲ' 'ನಿಷ್ಪಂದಂ' 'ಶಾಂತಂ'–ಈ ಪದಗಳ ನಾದಪರಿಣಾಮ ಓದುಗರಲ್ಲಿ ಅಂದಿನ ಘಟನೆಗಳ ಬಗೆಗೆ ಒಂದು ಅಲೌಕಿಕ ಬೆರಗನ್ನು ಉಂಟುಮಾಡುತ್ತದೆ. ಒಂದು ಬಗೆಯ ಭಾವಾತ್ಮಕ ಅಭದ್ರತೆಯನ್ನು ಓದುಗನಲ್ಲಿ ಸೃಷ್ಟಿಸುವ ಪಂಕ್ತಿಗಳಿವು ಯೆಹೂದ್ಯರು ಗುಂಪುಗೂಡಿ "ತೋಲಗಳ ಗುಂಡೂಳುವಂತೆ" (೨೨೮) "ಆರ್ಭಟಿಸಿ"ದುದು (೨೨೯), ಯೇಸುವನ್ನು "ಚಮ್ಮಟಿಗೆಯಿಂ ಬಡಿಸಿ" (೨೩೦)[೨೦] ಕೈಕಾಲುಗಳಿಗೆ ಮೊಳೆ ಜಡಿಸಿ ಶಿಲುಬೆಗೆ ಹಾಕಿದುದು, ಅಲ್ಲಿ ಜನಗಳು ಪರಿ ಪರಿಯಾಗಿ ಕಟಕಿಯಾಡಿದುದು, ಯೇಸು ಅಸುನೀಗಿದುದು–ಇಲ್ಲೆಲ್ಲ ವೇಗದಿಂದ ನಡೆಯುವ ಕವನದ ಕ್ರಿಯೆಯ ಗತಿ,[೨೧] "ಮೆಲ್ಲ ಮೆಲ್ಲನೆ ತೆಗೆದುದಾ ಕತ್ತಲ ಮೋಡ"(೩೪೮)–ಈ ಪಂಕ್ತಿಯಿಂದಲೇ ನಿಧಾನಿಸುತ್ತದೆ; "ಸದ್ದಿಲ್ಲ, ಸುಳಿವಿಲ್ಲ" ಎಂಬ ಪದಗಳು ಕ್ರಿಯೆಯ ಮೊದಲಿನ ಓಟಕ್ಕೆ ಸಮರ್ಥವಾದ ವೈದೃಶ್ಯವಾಗಿ ನಿಲ್ಲುತ್ತವೆ. ಈ ವರೆಗೆ ಕ್ರಿಯೆಯ ಬೇರೆ ಬೇರೆ ವಿವರಗಳಲ್ಲಿ ಒಂದರ ಮೇಲೊಂದರಂತೆ ಮಗ್ನನಾಗಿದ್ದ ಓದುಗನಿಗೆ, ಈ ವೈದೃಶ್ಯದ ದೆಸೆಯಿಂದ, ತಾನು ನಿಂತ ನೆಲವೇ ಇದ್ದಕ್ಕಿಂತದಂತೆ ಕುಸಿದು ಬಿದ್ದ ಅನುಭವವಾಗುತ್ತದೆ. ಯಾವುದೋ ಒಂದು ಅವ್ಯಕ್ತ ನಿರೀಕ್ಷೆ ಅವನ ಮನಸ್ಸಿನಲ್ಲಿ ಅಪ್ರಜ್ಞಾಪೂರ್ವಕವಾಗಿ ಕುಟ್ಟುತ್ತದೆ. ಮೇಲೆ ಹೇಳಿದ ನಿಲುಗಡೆಯ ಮತ್ತು ಅಂತಿಮತೆಯ ಭಾವವನ್ನು ತಿದ್ದಿ, ಹೆಚ್ಚು ಮಹತ್ತ್ವದ ಒಂದು ಘಟನೆ–ಪುನರುತ್ಥಾನ–ಬರಲಿದೆ ಎಂಬ ಸೂಚನೆಯನ್ನು ಈ ಪಂಕ್ತಿಗಳು ಬಹಳ ಸೂಕ್ಷ್ಮವಾಗಿ ಕೊಡುತ್ತವೆ.

ಹೀಗೆ ಕವನದ ಆದ್ಯಂತ್ಯಗಳಲ್ಲಿ ಬರುವ ಪಂಕ್ತಿಗಳು ವಸ್ತುನಿಷ್ಠತೆಯ ಮತ್ತು ಧರ್ಮದರ್ಶನದ ದೃಷ್ಟಿಯಲ್ಲಿ ಕವನಕ್ಕೆ ಸಮಗ್ರತೆಯನ್ನು ಕೊಡುತ್ತವೆ. ಕಲಾವಂತಿಕೆಯ ಮತ್ತು ಒಟ್ಟು ಶಿಲ್ಪದ ದೃಷ್ಟಿಯಲ್ಲಿ ಅಸಾಮಾನ್ಯವಾಗಿ ಸೂಕ್ಷ್ಮವಾಗಿರುವಂಥ ಸೌಂದರ್ಯಾನುಭೂತಿಯನ್ನು ಉಂಟುಮಾಡುತ್ತದೆ.

"ಗೊಲ್ಗೊಥಾ" ಕವನದ ಒಟ್ಟು ನಿವೇದನೆಯನ್ನು ಅರ್ಥಮಾಡಿಕೊಳ್ಳುವಾಗ ಪ್ರತಿಯೊಂದು ಮೂಲ ಸುವಾರ್ತೆಗಳಲ್ಲಿ ವ್ಯಕ್ತವಾಗಿರುವ ವಿಶಿಷ್ಟ ನಿವೇದನೆಯನ್ನೂ ನಾವು ಗುರುತಿಸಬಹುದು. ಉದಾಹರಣೆಗೆ ಕ್ರಿಸ್ತನ ಅನುಯಾಯಿಗಳು ಯೇಸುವಿನ ರಾಜ್ಯದ ನಿಜಸ್ವರೂಪವನ್ನು ತಿಳಿದುಕೊಳ್ಳಬೇಕೆಂಬ ಉದ್ದೇಶದಿಂದ ಯೇಸು ಮತ್ತು ಪಿಲಾತನ ನಡುವಿನ ಸಂಭಾಷಣೆಯನ್ನು ಜಾನ್ ರಚಿಸಿದ್ದಾನೆ.[೨೨] ಪಿಲಾತನಿಗೆ ಅರ್ಥವಾಗದ ಮಾತುಗಳನ್ನು ಯೇಸುವಿನ ಬಾಯಿಯಲ್ಲಿ

ಜಾನ್ ಹಾಕಿರುವುದರ ಉದ್ದೇಶವೂ ಇದೇ.[೨೩] ಮತ್ತೊಂದು ಉದಾಹರಣೆಯನ್ನು ನೋಡುವುದಾದರೆ, ಯೇಸುವನ್ನು ಶಿಲುಬೆಗೇರಿಸಿದಾಗ ಮತ್ತು ಯೇಸು ಸಾಯುವಾಗ ಪ್ರಕೃತಿಯಲ್ಲಿ ಕಾಣಿಸಿಕೊಂಡ ಉತ್ಪಾತಗಳ ಪ್ರಸಂಗ ಉಂಟು. ಬೈಬಲಿನಲ್ಲಿ ಇಂಥ ವೈಚಿತ್ರ್ಯಗಳ ವರ್ಣನೆ ಬಂತೆಂದರೆ, ಅದು ''ಯಾಹ್ವೆಯ ದಿನ'ವನ್ನು ಸೂಚಿಸುತ್ತದೆ. ಎಂದು ಯೆಹೂದ್ಯರು ಅರ್ಥಮಾಡಿಕೊಳ್ಳುತ್ತಿದ್ದರು. ''ಯಾಹ್ವೆಯ ದಿನ''ವೆಂದರೆ ಒಂದು ನಿರ್ಣಾಯಕವಾದ ಮತ್ತು ವಿಶೇಷವಾದ ರೀತಿಯಲ್ಲಿ ಮನುಷ್ಯನ ಚರಿತ್ರೆಯನ್ನು ದೇವರು ಪ್ರವೇಶಿಸುವುದು.[೨೪] ಯೇಸು ಸಾವನ್ನಪ್ಪಿದ ಸಂದರ್ಭದಲ್ಲಿಯೂ ಪ್ರಕೃತಿಯಲ್ಲಿ ಉತ್ಪಾತಗಳು ಕಂಡುಬಂದವು ಎಂದು ಸೌವಾರ್ತಿಕರು ಹೇಳಿದುದರ ಉದ್ದೇಶವೂ ಇದೇ. ಯೇಸು ಸಾವನ್ನಪ್ಪಿದುದರಿಂದ ಆ ದಿನವೇ ''ಯಾಹ್ವೆಯ ದಿನ'', ಮುಕ್ತಿಪ್ರದಾಯಕ ಅಂತಿಮಯುಗ ಆರಂಭವಾಯಿತು ಎಂದು ತಿಳಿಸುವುದು.

'ಗೊಲ್ಗೊಥಾ'ದಲ್ಲಿ ಇವೆರಡು ಪ್ರಸಂಗಗಳ ನಿರೂಪಣೆಯಲ್ಲಿ (೧೨೯-೩೨, ೨೭೧-೭೭, ೩೧೫-೨೪) ಮೊದಲನೆಯದು ಉದ್ದೇಶಿಸಿದ ಧರ್ಮದರ್ಶನದ ವ್ಯಾಖ್ಯಾನ ಮತ್ತು ಎರಡನೆಯದು ನೆನಪಿಗೆ ತರುವ ಬೈಬಲ್ಲಿನ ''ಯಾಹ್ವೆಯ ದಿನ''ದ ಕಲ್ಪನೆ ಸಮರ್ಪಕವಾಗಿ ಧ್ವನಿತವಾಗಿದೆ. ಇದೇ ರೀತಿಯಲ್ಲಿ ''ಕ್ರಿಸ್ತನೆಂಬುವೀ ಯೇಸುವನೋ?'' (೧೪೩) ಎಂದು ಪಿಲಾತ ಪ್ರಶ್ನಿಸುವಲ್ಲಿಯೂ ಯೇಸು ಮನುಷ್ಯಕುಲದ ರಕ್ಷಕ ಎಂಬ ಧರ್ಮದರ್ಶನದ ಧ್ವನಿ ಇದೆ, ಏಕೆಂದರೆ ಕ್ರಿಸ್ತನೆಂದರೆ ರಕ್ಷಕನೆಂದರ್ಥ. ಇವೆಲ್ಲ ಮೂಲದಲ್ಲಿರುವ ವಿವರಗಳು ಹಾಗೂ ಅವುಗಳ ಧ್ವನಿಗಳು.

ಮೂಲದಲ್ಲಿರುವ ಆದರೂ ಕಾವ್ಯಾತ್ಮಕವಾಗಿರುವ ಮತ್ತು ಕ್ರೈಸ್ತಧರ್ಮ ದರ್ಶನಕ್ಕೆ ಸುಸಂಗತವಾಗಿರುವ ಕೆಲವು ವಿವರಗಳೂ ಕವನದಲ್ಲಿವೆ. ಇಂಥ ವಿವರಗಳಿಂದ ಕವನದ ಅರ್ಥ ಪರಿವೇಷ ಹೆಚ್ಚು ಉಜ್ವಲವಾಗಿದೆ, ಮೂಲ ಕಥಾನಕದ ಮತ್ತು ವ್ಯಕ್ತಿತ್ವದ ಅಂತರಂಗ ಹೆಚ್ಚು ಪಾರದರ್ಶಕವಾಗಿ ಕವನದಲ್ಲಿ ಒಡಮೂಡಿದೆ.

"......ಜ್ಞಾನವೃಕ್ಷದ ಬಳಿಯೆ
ವೆಂಟಣಿಸಿ ಕುಳಿತದರ ಫಲವ ಮೆಲಲಾರದದ
ನಕ್ಕಜದೊಳೀಕ್ಷಿಸುವ ಹಳೆಯ ಹಾವೆನೆ..." (೨೧-೨೩)

ಬೈಬಲಿನ ಜೆನೆಸಿಸ್ ಗ್ರಂಥದಲ್ಲಿ ಬರುವ ಮಾತಿದು.[೨೫] ಜ್ಞಾನವೃಕ್ಷದ ಫಲವನ್ನು ಮೆಲಲಾರದೆ ಅದನ್ನು ಆಸೆಪಟ್ಟು ನೋಡುತ್ತಾ ಇರುವ ಹಾವಿನ ಮಾತು ಅಲ್ಲಿಲ್ಲ. ಆದರೆ ಹಾವು, ಅದರಲ್ಲೂ ಹಳೆಯ ಹಾವು, ಜ್ಞಾನವೃಕ್ಷ ಎಂದೊಡನೆಯೇ ಬೈಬಲಿನ ಪ್ರಸಂಗದ ನೆನಪು ಮರುಕಳಿಸುತ್ತದೆ.

ಆದಿಪುರುಷನಾದ ಆದಮ ಮಾಡಿದ ಪಾಪ, ಅಂದಿನಿಂದ ಇಂದಿನವರೆಗೆ ಮನುಷ್ಯರಿಗೆಲ್ಲ ಆ ಪಾಪ ಅವನಿಂದಾಗಿ ತಟ್ಟಿದ್ದು ಜ್ಞಾಪಕವಾಗುತ್ತದೆ. ಈ ಪಾಪವನ್ನೂ ತರುವಾಯದ ಸಮಸ್ತ ಪಾಪಗಳನ್ನೂ ತನ್ನ ಜೀವನ ಮರಣಗಳಿಂದ ಯೇಸು ಪರಿಹರಿಸಿದನು ಎಂಬುದೂ ಜ್ಞಾಪಕವಾಗುತ್ತದೆ. ಪಿಲಾತನನ್ನು ಹಾವಿಗೆ ಹೋಲಿಸಿದುದರ ಔಚಿತ್ಯ ಸ್ಪಷ್ಟವಾಗಿ ಕಾಣುವುದಿಲ್ಲವಾದರೂ, ಈ ಅಸ್ಪಷ್ಟತೆಯನ್ನು ಹಾವು, ಜ್ಞಾನವೃಕ್ಷ–ಈ ಪದಗಳು ಉಂಟುಮಾಡುವ ಅರ್ಥಸಮೃದ್ಧಿ ಯಶಸ್ವಿಯಾಗಿ ಮರೆಮಾಜುತ್ತದೆ.

ಹಳೆಯ ಒಡಂಬಡಿಕೆಯಲ್ಲಿ "ಕಷ್ಟಪಡುತ್ತಿರುವ ಸೇವಕ" (Suffering Servant) ಎಂಬ ಒಂದು ವ್ಯಕ್ತಿತ್ವ ಉಂಟು. ಈ ಸೇವಕ ಮುಂಬರಲಿರುವ ರಕ್ಷಕನನ್ನು, ಮೆಸ್ಸಾಯನನ್ನು, ಸೂಚಿಸುತ್ತಾನೆ. ಐಸಾಯ ಪ್ರವಾದಿ ಇವನನ್ನು ಕುರಿತು ಹಾಡಿದ್ದನು. ಅತಿಯಾದ ಕಷ್ಟಗಳನ್ನು ಮತ್ತು ಅಪಮಾನವನ್ನು ಸಹಿಸಿಕೊಳ್ಳಬೇಕಾದರೂ ದೇವರ ಇಚ್ಚೆಗೆ ಇವನು ಬದ್ಧನಾಗಿರುವವನು, ಆದುದರಿಂದ ಇವನು "ಅನೇಕರ ಪಾಪಗಳನು ಪರಿಹರಿಸುವನು"[೧೬] ಎಂದಿದೆ. ತಾನೇ ಈ ಸೇವಕನು ಎಂದು ಯೇಸು ಸ್ಪಷ್ಟವಾಗಿ ತನ್ನನ್ನು ಗುರುತಿಸಿದ್ದನು.[೧೭] ಯೇಸುವನ್ನು ಅಪಮಾನಗೊಳಿಸಿದ ಪ್ರಸಂಗಗಳು, ಕೊರಡೆಯೇಟಿನ ಶಿಕ್ಷೆಯನ್ನನುಭವಿಸಿ ಮುಳ್ಳಿನ ಕಿರೀಟವನ್ನು ಧರಿಸಿದ ರಕ್ತಸಿಕ್ತನಾದ ಯೇಸುವಿನ ಚಿತ್ರ[೧೮] ಕ್ರೈಸ್ತ ಓದುಗನ ಸ್ಮೃತಿಯಲ್ಲಿರುವ ಈ ಸೇವಕನ ಚಿತ್ರವನ್ನು ಪುನಃ ಸಜೀವಗೊಳಿಸುತ್ತವೆ. ಪೈ ಅವರು ಐಸಾಯನ ಯಾವುದೇ ವರ್ಣನೆಯನ್ನು ಇದ್ದಕ್ಕಿದ್ದಂತೆ ಬಳಸಿಕೊಂಡಿಲ್ಲ, ಆದರೆ ಕವನದ ಕೆಲವು ಪಂಕ್ತಿಗಳು ಯಾತನೆಯನ್ನನುಭವಿಸುವ ಸೇವಕನ ಚಿತ್ರವನ್ನು ಸ್ಪಷ್ಟವಾಗಿ ಮೂಡಿಸುತ್ತವೆ:

"ಗಿಡುಗಗಳ ನಡುವೆ ತೊಡರಿದ ಕಪೋತಕದಂತೆ" (೭೦)
"....ನೆತ್ತರೊಡಮೂಡಿದೊಡ
ಮವನೊಂದು ಮಾತನೆತ್ತಿಲ್ಲ ! ಮಾ ಎಂದಿಲ್ಲ !
ಕಾಗೆಗಳ ಕೊತ್ತಳಂ ಕುಕ್ಕುವೆಳೆ ಕುಕಿಲಂತೆ" (೨೫೦–೫೨)

ಈ ಪಂಕ್ತಿಗಳ ಭಾವಕ್ಕೆ ಸಮೀಪವಗಿರುವ ಐಸಾಯ ಪ್ರವಾದಿಯ ಮಾತುಗಳು:

He will not cry or lift up his voice,
or make it heard in the street; "(42,2)
"He was oppressed and he was afflicted,
yet he opened not his mouth;
like a lamb that is led to the slaughter,
and like a sheep that before its shearers is dumb,
so he opened not his mouth." (53,7)

"ಒಂದು ಮಾತನೆತ್ತಿಲ್ಲ ! ಮಾ ಎಂದಿಲ್ಲ !" "ಕಾಗೆಗಳ ಕೊತ್ತಳದ ಕುಕ್ಕುವೆಳೆ ಕುಕಿಲಂತೆ"–ಈ ಪಂಕ್ತಿಗಳಲ್ಲಿ ಐಸಾಯನ ಪಂಕ್ತಿಗಳ ಪರಿಣಾಮವೇ ಮೂಡಿದೆ. ಬೈಬಲಿನ ಪರಿಚಯವಿದ್ದವರಿಗೆ ಈ ಪಂಕ್ತಿಗಳಲ್ಲಿ ಐಸಾಯನ ಹಾಡಿನ ಧ್ವನಿ ಸ್ಪಷ್ಟವಾಗಿ ಕೇಳುವುದು.

ಹೀಗೆ ಕ್ರೈಸ್ತ ಧರ್ಮದರ್ಶನದ ಕೆಲವು ಮಹತ್ತ್ವದ ಅಂಶಗಳು ಕವನದಲ್ಲಿ ಕಂಡು ಬಂದು, ಕವನದ ಘನತೆ ಹೆಚ್ಚಿದೆ, ಅರ್ಥವಂತಿಕೆ ಶ್ರೀಮಂತವಾಗಿದೆ.

ಕೊನೆಯದಾಗಿ ಯೇಸುವಿನ ವ್ಯಕ್ತಿತ್ವ ಮತ್ತು ಯೆಹೂದ್ಯರು ಅವನನ್ನು ತಿರಸ್ಕರಿಸಿದ ರೀತಿ ಕವನದಲ್ಲಿ ಮೂಡಿಬಂದ ಬಗೆಯನ್ನು ನೋಡಬಹುದು:

> "........
>
> ಈ ಹರೆಯದೀ ಶೋಭೆಯೀ ಜಗತ್ಪ್ರೇಮದೀ
> ಸುಜ್ಞಾನದೀ ಶಾಂತಿಯೀ ಮಹಿಮೆಯೀ ಜಿತಾ
> ತ್ಮತೆಯೀ ತಪಃಶಕ್ತಿಯೀ ಧರ್ಮದೀ ಮನುಜ
> ದೇವತನದಿ ಸುಧಾಸಿಂದು ಯೋರ್ದನಿನಂತೆ
> ಸುರಿವುದಕಟಾ ಮೃತಸಮುದ್ರದಲಿ ನೋಡ !" (೯೪–೯೮)

ಯೇಸುವಿನ ಅಂತರಂಗದ ಮತ್ತು ಬಹಿರಂಗದ ಸುಕುಮಾರವಾದ ವರ್ಣನೆಯೊಂದು ಇಲ್ಲಿದೆ. ಈ ಸುಕುಮಾರತೆ ಹೇಗೆ ತಿರಸ್ಕೃತವಾಯಿತು ಎಂಬ ವರ್ಣನೆಯೂ ಇದೆ. ಯೋರ್ದನ್ ಯೆಹೂದ್ಯರ ನಾಡಿನಲ್ಲಿರುವ ನದಿ. ಇತ್ತೀಚಿನ ಕೆಲವು ಕ್ರೈಸ್ತಗೀತೆಗಳಲ್ಲಿ ಇದನ್ನು ಸ್ವರ್ಗಲೋಕಕ್ಕೆ ಹೋಲಿಸಿದುದುಂಟು: ಇಹಲೋಕದ ನೋವುಗಳನ್ನು ಮರೆಸಿ ಸಾಂತ್ವನ ನೀಡುವ ಪ್ರವಾಹವಿದು. ಮೃತಸರೋವರಕ್ಕೂ ಜೀವದಾನವು ಮಾಡುವ ನದಿಯೆಂದು ಇದನ್ನು ಬೈಬಲಿನಲ್ಲಿ ವರ್ಣಿಸಿದೆ.[೨೯] ಕುಷ್ಠರೋಗಿಯೊಬ್ಬನು ಈ ಹೊಳೆಯಲ್ಲಿ ಮಿಂದು ಗುಣಮುಖನಾಗಿದ್ದನು.[೩೦] ರಕ್ಷಕನು ಬರಲಿದ್ದಾನೆ ಎಂದು ಯೇಸುವಿನ ಆಗಮನವನ್ನು ಮುಂಚಿತವಾಗಿ ಸಾರಿದ ಸ್ನಾನಿಕ ಯೋಹಾನನು ಯೋರ್ದನ್ ನದಿಯಲ್ಲಿ ಜನರಿಗೆ ಸ್ನಾನದೀಕ್ಷೆಯನ್ನು ಕೊಡುತ್ತಿದ್ದನು.[೩೧] ಹೀಗೆ ಬೈಬಲಿನಲ್ಲಿ ಯೋರ್ದನ್ ಎಂದರೆ ಪವಿತ್ರಪವಾಹ, ಒಂದು ಕ್ಷೇಮವಾಹಿನಿ ಎಂದು ಚಿತ್ರಿತವಾಗಿದೆ. ಅದರೆ ಇಂಥ ಪುಣ್ಯತೀರ್ಥದಂತಿದ್ದ ಯೇಸುವನ್ನು ಯೆಹೂದ್ಯರು ತಿರಸ್ಕರಿಸಿದುದು ಯೋರ್ದನ್ ನದಿ ಮೃತಸರೋವರವನ್ನು ಸೇರಿದಂತಾಯಿತು. ಯೇಸುವಿನ ಜೀವನದ ಒಂದು ಮಟ್ಟದ ವೈಫಲ್ಯವನ್ನೂ, ಅಂಥ ವೈಫಲ್ಯವನ್ನು –ಅದು 'ಮೃತ" ಸಮುದ್ರದಷ್ಟೇ ಜಡವಾಗಿರಲಿ–ಮತ್ತೆ ಹಸನುಗೊಳಿಸಬಲ್ಲ ಆವನ ಮಹಿಮೆಯನ್ನೂ ಯೋರ್ದನ್ ಮತ್ತು ಮ್ರುತಸಮುದ್ರ ಪದಗಳು ಸೂಚಿಸುತ್ತವೆ. "ಈ

ಹರೆಯದೀ ಶೋಭೆಯೀ....'' ಈ ಪಂಕ್ತಿಗಳ ಭಾವಸಮೃದ್ಧಿಯನ್ನು ಪಡೆದಿರುವ ''ಸುಧಾಸಿಂಧು'' ಪ್ರಯೋಗ ಮೃತಸಮುದ್ರ ಎಂಬ ಪದಕ್ಕೆ ತೀಕ್ಷ್ಣವಾದ ವೈದೃಶ್ಯವನ್ನು ತಂದೊಡ್ಡುತ್ತದೆ. ಯೇಸು ಮತ್ತು ಯೆಹೂದ್ಯರ ನಡುವಣ ಸಂಬಂಧವನ್ನು ಇವೆರಡೇ ಪದಗಳು ಬಹಳ ಸ್ಪಷ್ಟವಾಗಿ ಅಭಿವ್ಯಕ್ತಿಗೊಳಿಸುತ್ತವೆ. ಮೃತಸಮುದ್ರವನ್ನು ಸೇರಿದರೂ ಯೇಸು ''ಸುಧಾಸಿಂಧು''. ಪೈ ಅವರ 'ಗೊಲ್ಗೊಥಾ' ಈ ಸುಧಾಸಿಂಧುವಿನ ಚಿತ್ರವನ್ನು ಕನ್ನಡ ಸಾಹಿತ್ಯದಲ್ಲಿ ಚಿರಸ್ಥಾಯಿಯಾಗುವಂತೆ ಮಾಡಿದ ಒಂದು ಅಪೂರ್ವ ಪುಣ್ಯಕವನ.

## ೫.೪ ಸಂದರ್ಭ ಸೂಚಿ

೧. ಪ್ರೊ. ಎ.ವಿ. ನಾವಡ: "ವಿವಕ್ಷೆ" ಮುಳಿಯ ಕೃಷ್ಣಭಟ್ಟ ಸ್ಮಾರಕ ಪುಸ್ತಕಾಲಯ, ಕರ್ನಾಟಕ ಸಂಘ, ಪುತ್ತೂರು. ಪುಟ ೪೫

೨. ಪ್ರೊ. ಎ.ವಿ. ನಾವಡ: "ವಿವಕ್ಷೆ" ಮುಳಿಯ ಕೃಷ್ಣಭಟ್ಟ ಸ್ಮಾರಕ ಪುಸ್ತಕಾಲಯ, ಕರ್ನಾಟಕ ಸಂಘ, ಪುತ್ತೂರು. ಪುಟ ೪೬

೩. ಎಸ್. ಶಿವಾಜಿ ಜೋಯಿಸ್: "ಆಕಲನ", ಗೋವಿಂದ ಪೈ ಸಾಹಿತ್ಯ ಸಮೀಕ್ಷೆ, ಆರ್. ಎಸ್. ನಾಯ್ಡುನಗರ ಮೈಸೂರು. ಪುಟ ೧೮

೪. ಎಡ್ವರ್ಡ್ ನೊರೋನ್ಹ: ಗೋವಿಂದ ಪೈ, ಪುಸ್ತಕದಲ್ಲಿ ಪ್ರಕಟಿತ ಲೇಖನ: 'ಗೊಲ್ಗೊಥಾ' ಪುಟ ೩೭

# ೬ ಗೊಲ್ಗೊಥಾದ ಅನನ್ಯತೆ

"ಗೊಲ್ಗೊಥಾ ಅಥವಾ ಏಸುವಿನ ಕಡೆಯ ದಿನ" ಎಂಬ ಕವಿತೆ ದಿ. ಗೋವಿಂದ ಪೈ ಅವರ ದೀರ್ಘ ಕವನ ಒಂದರ್ಥದಲ್ಲಿ ಈ ಕವನ ಕವಿತೆಯಾಗಿ ಪಟಿಕಗೊಂಡಂಥವಾದರೂ, ಆಂತರ್ಯದಲ್ಲಿ ಕಥನಗಳನ್ನು ಹೊತ್ತುಕೊಂಡಿರುವುದರಿಂದ ಕಥನ ಕವನಗಳು. ಹೀಗಾಗಿ ಕಥೆಗಳು ಅಥವಾ ಚರಿತ್ರೆ ಕಾವ್ಯದ ಮೂಲಕ ಮರುಹುಟ್ಟು ಪಡೆಯುವ ವಿಧಾನದಲ್ಲೇ ಸಂಕೇತಗಳಿಂದ ಚಲನೆಗೊಳ್ಳುವ ಉಸಾಬರಿಗೆ ತೊಡಗದಿರುವ ಕಾರಣದಿಂದಾಗಿ ಹೆಚ್ಚಿನ ಅನನ್ಯತೆಯನ್ನು ಪಡೆದುಕೊಳ್ಳುತ್ತದೆ. ಕವಿಗೆ ಒಂದು ನಿಶ್ಚಿತವಾದ ಪಥ ಎದುರಿಗಿದ್ದು ಕೊಂಡಿರುವುದರಿಂದ ಹೊರ ಆವರಣಗಳನ್ನು ರಚಿಸುವಲ್ಲಿ ತನ್ನ ಕೌಶಲ ಪ್ರದರ್ಶಿಸಬೇಕಾಗುತ್ತದೆ. ಹೀಗಾಗಿ ಕಥೆಯೋ, ಚರಿತ್ರೆಯೋ ಕವಿಗೆ ನಿಶ್ಚಿತವಾದ ಪಥ ಒಂದನ್ನು ಒದಗಿಸಿಕೊಡುವುದರಲ್ಲಿಯೂ ಅನನ್ಯತೆ ಇರುತ್ತದೆ. ಕಥೆ ಯಾ ಚರಿತ್ರೆ ಕವಿಯನ್ನು ಸಂವೇದಿಸಿರುವ ಕ್ರಮದ ಅರಿವು ಓದುಗನಿಗೆ ಒದಗುವುದು ಕೂಡ ಒಂದು ಅನನ್ಯತೆಯೇ.

ಸಹಜವಾಗಿಯೇ ಗೋವಿಂದ ಪೈ ಅವರ ಜೀರ್ಣಾಗ್ನಿಯಲ್ಲಿ ಏಸುಕ್ರಿಸ್ತನ ಜೀವನ ಶೈಲಿ ಅದ್ಭುತವಾದ ಮಾನವ ತತ್ವ, ಏಕತಾನತೆಯನ್ನು ಸದೆ ಬಡಿದು, ಹೊಸದೇ ಚಲನೆಯೊಂದಕ್ಕೆ ಜೀವ ಜಗತ್ತನ್ನು ತುಡಿಯುವಂತೆ ಮಾಡಿದ ರೀತಿಗಳು ಹೊಸ ಅನುಭವಗಳನ್ನು ಬರೆಯಬೇಕಾದ ಒತ್ತಡಗಳನ್ನು ನೀಡಿ ಹೊಸ ಕ್ರಿಯಾಶೀಲತೆಯನ್ನು ರಗ್ತಗತವಾಗಿಸಿವೆ. ಈ ಕವಿತೆ ಬರೆದ ಕಾಲಕ್ಕೆ ಗಾಂಧೀಜಿ ತನ್ನ ಅಹಿಂಸಾ ಹೋರಾಟದಿಂದ ಭಾರತದ ಸೌಭಾಗ್ಯದ ದಿಕ್ಕನ್ನು ಬದಲಿಸಲು ಕಂಕಣ ಬದ್ಧವಾಗಿದ್ದ ನಿರ್ಣಯಾತ್ಮಕ ಘಟ್ಟದ ಕಾಲ ಚಲೇಜಾವ್ ಚಳುವಳಿ, ಪರದೇಶೀ ಸರಕುಗಳನ್ನು ನಿರ್ಬಂಧಿಸಿ ಸ್ವದೇಶಿ ವಸ್ತುಗಳನ್ನು ಜನ ಆರಿಸಿಕೊಳ್ಳುತ್ತಿದ್ದ, ದೇಶ ವಿಭಜನೆಗಾಗಿ ಪಟ್ಟಭದ್ರ ಹಿತಾಸಕ್ತಿಗಳು ಚುರುಕಾಗಿ ತೊಡಗಿಕೊಂಡಿದ್ದ ಕಾಲದ ಘಟ್ಟದಲ್ಲಿ ಏಸು ಗೋವಿಂದ ಪೈಗಳಲ್ಲಿ ಹೊಸದೇ ಚಿಂತನೆಯನ್ನು ಬಿತ್ತಿ ಬಿತ್ತಿದ್ದ ಕಾಲ ಅದು. ನನ್ನ ಅಭಿಪ್ರಾಯದಲ್ಲಿ ಗಾಂಧೀಜಿಯವರ ವ್ಯಕ್ತಿತ್ವ ಗೋವಿಂದ ಪೈಗಳನ್ನು ಆಕರ್ಷಿಸಿದೆ. ಪರಧರ್ಮ ಸಹಿಷ್ಣುತೆಯೊಂದಿಗೆ, ಸ್ವಕೀಯ ಧರ್ಮದ ಆಚಾರ ವಿಚಾರಗಳನ್ನು ಶ್ರೀಮಂತಗೊಳಿಸಲು ತೊಡಗಿಕೊಂಡ ಗಾಂಧೀಜಿ ಸ್ವಾತಂತ್ರ್ಯ ಹೋರಾಟಗಾರರಾಗಿದ್ದಾಗಲೇ, ವಿಚಿತ್ರವಾದ ಸಂವಿಧಾನಗಳೊಂದಿಗೆ ಧರ್ಮ ಪ್ರವರ್ತಕರೂ ಆಗಿದ್ದರು, ಎನ್ನಬಹುದು. ಮುಸ್ಲಿಂ ವಿರೋಧೀಭಾವನೆ ಅವರಿಗೆ ಎಂದೂ ಗ್ರಾಹ್ಯವಾಗಿರಲಿಲ್ಲ. ಹಾಗೆಯೇ ಭಗವದ್ಗೀತೆಯನ್ನು ನೆಟ್ಟಿದ್ದರು. ಆರಾಧಿಸಿದ್ದರು. ಇಂದಿನ ಅನೇಕ ಪ್ರಖರ

ವ್ಯಾಖ್ಯಾನಕಾರರಿಗೆ ಭಗವದ್ಗೀತೆಯನ್ನು, ಅದರ ಸಾರವನ್ನು ನೆಚ್ಚಿಕೊಳ್ಳುವ ಮಂದಿ ಮತೀಯ ಮನೋಭಾವದವರಾಗಿ ಕಾಣಿಸಿಕೊಳ್ಳುವುದು ಒಂದು ದುರಂತ.

ಆದರೆ ಗೋವಿಂದ ಪೈಗಳಿಗೆ ಮಹಾತ್ಮಾ ಗಾಂಧೀಜಿಯವರ ಸ್ವಾತಂತ್ರ್ಯ ಹೋರಾಟದ ಕೆಚ್ಚು ಹಾಗೂ ಆಂತರ್ಯದಲ್ಲಿ ಅಪ್ಪಟ ಧರ್ಮಬೀರುವಾದಂತಿದ್ದ ಸನಾತನ ಶ್ರದ್ಧೆ ದೊಡ್ಡ ರೀತಿಯ ಪ್ರಭಾವವನ್ನೇ ನಿರ್ಮಿಸಿರಬೇಕು. ದೇಶೀಯವಾದ ಸಂವಹನದೊಂದಿಗೆ, ಮಾತೃಧರ್ಮದ ಪರಿಭಾಷೆಯೊಂದಿಗೆ ಬೆಸೆದ ಸೌರಭದಲ್ಲಿ ಪೈಗಳು ಅನ್ಯಧರ್ಮೀಯರಾದ ಏಸುವಿನ ಕಡೆಯದಿನಗಳು ಹಿಂಸೆಯ ಆವರಣದಲ್ಲಿ ಬೆಂದಿದ್ದರೂ ಮನುಜಧರ್ಮಕ್ಕೆ ಸ್ವೀಕೃತಿಯಾಗಬೇಕಾದ ಅಹಿಂಸೆಯನ್ನು ಬೋಧಿಸುತ್ತಾ ವಿಧಿವಶಗೊಂಡ ಕಥನಗಳನ್ನು ಕಾವ್ಯವಾಗಿಸಿದ್ದಾರೆ. ಈ ಅಂಶವೇ ಸ್ಪಷ್ಟವಾಗಿ ನಿರೂಪಿಸುವಂತೆ ಪೈಗಳ ಮೇಲೆ ಗಾಂಧೀಜಿಯವರ ಸ್ವಾತಂತ್ರ್ಯ ಹೋರಾಟದ ಕೆಚ್ಚು ಹಾಗೂ ಅಹಿಂಸೆಯ ಪ್ರತಿಪಾದನೆ ಪ್ರಭಾವ ಬೀರಿದೆ. ಇದರಿಂದಾಗಿ ಪೈಗಳ ಗೋಲ್ಗೊಥಾ ಕವಿತೆ ಜೀವಸ್ಪರ್ಶಿ ಕವಿತೆ. ಮಹಾತ್ಮರ ನಿರ್ವಾಣದ ಕಥಾನಕಗಳನ್ನು ಕಾವ್ಯ ಭೂಮಿಕೆಯಲ್ಲಿ ಹಿಡಿದಿಟ್ಟ ಅನನ್ಯ ರಚನೆಗಳು, ನಮ್ಮ ಭರವಸೆಗಳು ಸರ್ವಾಂತರ್ಯಾಮಿಯಾಗಿ, ಜಾಗತಿಕ ಸಂದರ್ಭದಲ್ಲಿ ಅವು ಅನ್ಯಧರ್ಮೀಯರ ಭರವಸೆಗಳ ಜತೆಗೆ ಸ್ಪಂದಿಸಬೇಕೆಂಬ ಮನೋಭಿಲಾಷಿಗಳಿಗೆ ಮಾತ್ರ ಗೊಲ್ಗೊಥಾ ಕವನಗಳ ರಚನೆ ಸಾಧ್ಯವ್ವಾಗಬಲ್ಲದು. ಗಾಂಧೀಜಿ "ರಾಘವ ಅಲ್ಲಾ ತೇರೆ ನಾಮ್" ಎಂದು ಶ್ರುತಪಡಿಸಿದ ವಿನಯದ, ಅನನ್ಯತೆಯ ಛಾಯೆ ಗೋವಿಂದ ಪೈಗಳಲ್ಲೂ ಇದೆ ಎಂಬುದೇ ಇಲ್ಲಿ ನನ್ನ ವಾದ.

"ಗೊಲ್ಗೊಥಾ" ಕವಿತೆಯಲ್ಲಿನ ಈ ಸಾಲುಗಳನ್ನು ನಾವು ಅವಶ್ಯವಾಗಿ ಗಮನಿಸಬೇಕು.

**ತನ್ನ ಕಡಿವರ್ಗೆ ತಣ್ಣೆಳಲೀವ ಮರದಂತೆ,**
**ತನ್ನಳಲನವರ ಹಂಬಲದಿ ಮರೆದು ಸುರಿದು**
**"ಕ್ಷಮಿಸಿವರನೆಲೆ ತಂದೆ! ತಾವೇನನೆಸಗಿದಪೆ**
**ವೆಂದರಿಯರಿವರು.**

ಇಲ್ಲಿ ಕವಿ, ಭೇದಭಾವವೆಣಿಸದೆ – ತಮ್ಮನ್ನು ಕಡಿಯುವ ಜೀವ ತೆಗೆಯುವ ಮಂದಿಗೂ ತಂಪಾದ ನೆರಳು ಬೀರುತ್ತಲೇ ಇರುವ ಮರಗಳ ರೀತಿ, ಏಸು ತನ್ನನ್ನು ಶಿಲುಬೆಗೇರಿಸಿ ಈ ಜೀವನಯಾತ್ರೆಯ ಸಮಾಪ್ತಿಯನ್ನು ಮಾಡತೊಡಗಿದ ಮಂದಿಗೂ ದೇವರೆಡೆ ವಿನಯದಿಂದ ತಾವೇನು ಮಾಡುತ್ತಿದ್ದೇವೆ ಎಂಬುದನ್ನು ತಿಳಿಯದ ಈ ಮಂದಿಯನ್ನು ಕ್ಷಮಿಸು ತಂದೆ ಎಂದು ಬೇಡುವ ಚಿತ್ರವನ್ನು ಒದಗಿಸಿದ್ದಾರೆ.

ಕಡಿದ ಮೇಲೆ ನೆರಳೂ ಇಲ್ಲ, ಮರವೂ ಇಲ್ಲ. ಹಾಗೆಯೇ ಶಿಲುಬೆಗೇರಿದ ಮೇಲೆ ಏಸು ಇರುವುದಿಲ್ಲ. ಅವನ ಮಾತುಗಳು ಮಾತ್ರ ಜೀವಂತವಾಗಿರುತ್ತದೆ. ದಯಾರ್ದ್ರತೆಯನ್ನು ಸಾವಿನ ಸಮ್ಮುಖದಲ್ಲೂ ಏಸು ಬಿಡಲಾರ. ಒಂದು ಹಂತದಿಂದ ಬಿಡುಗಡೆ ಪಡೆಯುವ ಜೀವಾತ್ಮ ಸತ್ಯಕ್ಕೂ ಇದೆಯೋ ಇಲ್ಲವೋ? ಆದರೆ ಇಂಥದೊಂದು ಚಿತ್ರವನ್ನು ಗಟ್ಟಿಯಾದ ಕವಿತೆಯ ಚೌಕಟ್ಟಿನಲ್ಲಿ ಕಟ್ಟಿಕೊಡುವ ಕವಿ ಚಾರಿತ್ರಿಕ ಸತ್ಯವೊಂದನ್ನು ಭಾವನಾತ್ಮಕ ಸಂವೇದನೆಯೊಂದನ್ನು ತನ್ನ ಮುಂದಿನ ತಲೆಮಾರಿಗೂ ಒಯ್ಯುವ ಪ್ರಯತ್ನ ನಡೆಸುತ್ತಾನಲ್ಲ, ಅದು ನಿಜಕ್ಕೂ ವಿಶಿಷ್ಟವಾದದ್ದು, ಅನನ್ಯವಾದದ್ದು.

“ಗೋಲ್ಗೋಥಾ” ಕವಿತೆಯ ನಾಯಕ ಏಸುಕ್ರಿಸ್ತ ತನ್ನ ಸಾವಿನ ಸಂದರ್ಭದಲ್ಲಿಯೂ, ತನ್ನನ್ನು ಶಿಲುಬೆಗೇರಿಸಿ ಸಾಯಿಸುತ್ತಿರುವವರ ಕುರಿತು “ತಾವೇನು ಮಾಡುತ್ತಿದ್ದೇವೆಂಬುದನ್ನು ಅರಿಯದ ಈ ಮಂದಿಯನ್ನು ಕ್ಷಮಿಸು” ಎಂದು ಬೇಡಿಕೊಂಡನಂತೆ.

ಇಷ್ಟಕ್ಕೂ ಪೈಗಳು ಏಸು ಬೋಧಿಸಿದ, ಧರ್ಮಕ್ಕೆ ಸೇರಿದವರಲ್ಲ ಆದರೂ ಅನ್ಯಧರ್ಮೀಯ ಪ್ರವರ್ತಕನಾದ ಏಸುವಿನ ನೋವು, ಅಸಹಾಯಕತೆ, ತ್ಯಾಗ, ಬಲಿದಾನಗಳ ಬಗ್ಗೆ ಗೌರವ ಮಾಡಿಕೊಂಡಿದ್ದರಿಂದಲೇ ಪೈಗಳಿಗೆ ಈ ಯುಗಪುರುಷನ ಬಗೆಗೆ ಕವಿತೆಗಳನ್ನು ಬರೆಯುವ ಗರ್ಜು ರೂಪ ಪಡೆದಿರಬಹುದು. ಇದು ಪೈಗಳ ಸಹಿಷ್ಣುತೆ ಅಂತೆಯೇ ಪೈಗಳ ಕಾಲದಲ್ಲಿ ಬೇರೂರಿದ್ದ ಸಹನೆ, ಸಂಯಮದೊಂದಿಗಿನ ಜನರ ಮನೋಧರ್ಮದಿಂದಲೇ ಈ ಸಹಿಷ್ಣುತೆ ಅವರ ಶಕ್ತಿಯಾಗಿ ಈ ಕಾವ್ಯಗಳಲ್ಲಿ ತೊಡಗಿಕೊಂಡಿರಬಹುದು.

ಇಂಥ ಈ ಶುದ್ಧ ಸ್ವರೂಪದ ಕಾವ್ಯಕ್ಕಾಗಿ ಕವಿಯ ತಹತಹ ಹಾಗೂ ಅನ್ಯಧರ್ಮೀಯ ಪ್ರವರ್ತಕರ ಕುರಿತೂ ಆಸ್ಥೆ ವಹಿಸಿ, ಕಾವ್ಯ ಶಿಲ್ಪದ ಸಾಂದ್ರಕ್ಕೆ ನೈತಿಕ ಧರ್ಮಪ್ರವರ್ತಕರ ಜೀವನದರ್ಶನವನ್ನು ಕೇಂದ್ರವಾಗಿಸಿದ ಪರಧರ್ಮ ಸಹಿಷ್ಣುತೆಯನ್ನು ನೆನೆಸಿಕೊಳ್ಳುತ್ತ, ಇದೀಗ ಭಾರತ ತೆವಳಿಕೊಂಡು ಸಾಗುತ್ತಿರುವ ಪ್ರಸ್ತುತದ ಭಯಾನಕ ಸ್ಥಿತಿಯನ್ನು ಅವಲೋಕಿಸಲೇಬೇಕಾಗಿದೆ. ಬ್ರಹ್ಮಾಂಡದ ಕಲ್ಪನೆಯಿಂದಾಗಿ ಯೋಚಿಸಬಲ್ಲ ಪ್ರತಿ ವ್ಯಕ್ತಿಯೂ ವ್ಯಕ್ತ ಮಧ್ಯವಾದ ಈ ಭವದಲ್ಲಿ ಒಂದಿಲ್ಲೊಂದು ಭಯದಲ್ಲಿ, ಗೊಂದಲದಲ್ಲಿ ಬಳಲುತ್ತ ಇರುತ್ತಾನೆ. ಇದು ಸದಾಕಾಲವೂ ಅಲ್ಲದಿರಬಹುದು. ಈ ಭಯ ಹಾಗೂ ಗೊಂದಲಗಳಿಂದಾಗಿಯೇ ದ್ವೈತ, ಅದ್ವೈತ ಸಿದ್ಧಾಂತಗಳು, ಮುಂದುವರಿದು ವಿಶಿಷ್ಟಾದ್ವೈತ ಸಿದ್ಧಾಂತವು ಜನ್ಮ ತಳೆಯಿತೆನ್ನಬಹುದು. ಜೊತೆಗೆ ದ್ವೈತಿಗಳು ಅದ್ವೈತಿಗಳನ್ನು ಅದ್ವೈತಿಗಳು ದ್ವೈತಿಗಳನ್ನು

ತಂತಮ್ಮ ಚರ್ಚೆ, ತರ್ಕಗಳ ಮೂಲಕ ನಿಂದಿಸಿಕೊಂಡಿದ್ದು, ತಾವೇ ಮಿಗಿಲು ಎಂದು ಪರಸ್ಪರ ಕಚ್ಚಾಡಿಕೊಂಡ ಕೆಲವಾದರೂ ಪ್ರಕರಣಗಳನ್ನು ಕೇಳಿದ್ದೇವೆ. ಅನುಭವಿಸಿದ್ದೇವೆ. ಇಲ್ಲಿ ದ್ವೈತ, ಅದ್ವೈತ ಸಿದ್ಧಾಂತ, ಸಿದ್ಧಾಂತಿಗಳನ್ನು, ಅನುಯಾಯಿಗಳನ್ನು ಸಾಂಕೇತಿಕವಾಗಿ ಹೆಸರಿಸಿರುವುದು. ಇಡೀ ಪ್ರಪಂಚ ದ್ವೈತ ಅದ್ವೈತಗಳ ನೆಲೆಯಲ್ಲಿಯೇ ಮುಖ್ಯವಾಗಿ ಬಣಗಳಾಗಿ ರೂಪಗೊಂಡು ತಾವೇ ಶ್ರೇಷ್ಠ ಎಂದು ಪ್ರತಿಪಾದಿಸಿಕೊಂಡು ಇರದಿರಬಹುದು. ಆದರೆ ಭಾಷೆ, ಜನಾಂಗ, ಜಾತಿ, ಧರ್ಮ, ಬಣ್ಣ, ರಾಜಕೀಯ ಸಿದ್ಧಾಂತಗಳ ನೆಲೆಯಲ್ಲಿ ಅರಿತೋ, ಅರಿಯದೆಯೋ ಬಣಗಳಾಗಿ ಒಡೆದು ಸುರಾಸುರರು ನಮ್ಮ ಭಾರತೀಯ ಪುರಾಣದ ಸಂದರ್ಭದಲ್ಲಿ ಕಡೆದಂತೆ ಕ್ಷೀರಸಾಗರ ಮಥನವನ್ನು ನಡೆಸಿಯೇ ಇದ್ದಾರೆ. ಎಲ್ಲರಿಗೂ ಅಮೃತದ ಬಗೆಗಿನ ಬೆರಗು ಹಾಗೂ ಆಸೆ ಇದೆ. ನಂಜುಂಡನಾಗಬೇಕಾದವರು ದೊರೆಯದಿದ್ದರೂ ಮಥನದ ಸಂದರ್ಭದಲ್ಲಿ ಹುಟ್ಟಿ ಬರುವ ಲಕ್ಷ್ಮಿಗಾಗಿ, ಕೌಸ್ತುಭಕ್ಕಾಗಿ ಐರಾವತಕ್ಕಾಗಿ ಪರಿತಪಿಸುವ ಬುದ್ಧಿಜೀವಿಗಳು ಇದ್ದಾರೆ. ಅಜ್ಞಾನದಿಂದ ಆ ಅಜನ್ಮ ದ್ವೇಷ ಕಟ್ಟಿಟ್ಟುಕೊಂಡು ಹೊಡೆದಾಡುತ್ತಿರುವವರ ದೃಷ್ಟಿ ಕೇವಲ ಅಮೃತಕ್ಕಾಗಿ, ಪರಸ್ಪರರ ಹೊಂದಾಣಿಕೆ, ಸಹಿಷ್ಣುತೆಯಲ್ಲಿಯೇ ಅಮೃತವಿದೆ ಎಂದು ಅವರು ತಿಳಿದುಕೊಳ್ಳಲಾರರು.

ಸತ್ಯವನ್ನೇ ದಾರಿಯಾಗಿಸಿಕೊಂಡು, ಅಹಿಂಸೆಯಲ್ಲೇ ನಂಬಿಕೆ ಇಟ್ಟು ಬ್ರಿಟಿಷ್ ಪ್ರಭುಗಳ ವಿರುದ್ಧ ಹೋರಾಟ ನಡೆಸಿದಂಥ ಗಾಂಧೀಜಿಯಂಥವರ ನೇತಾರತ್ವದಲ್ಲಿ ದೇಶ ಸುರಕ್ಷಿತವಾಗಿತ್ತು, ಅಥವಾ ಸುರಕ್ಷಿತ ದಡಕ್ಕೆ ದೇಶ ನಿಸ್ಸಂದೇಹವಾಗಿ ತಲುಪುತ್ತಿತ್ತು. ಗೋವಿಂದ ಪೈಗಳಂಥ ಪ್ರತಿಭಾವಂತ ಕವಿಗಳು ಗೊಲ್ಗೊಥಾ ಕವಿತೆಗಳ ಮೂಲಕ ಪರಧರ್ಮೀಯ ಪ್ರವರ್ತಕರ ಬಗೆಗೂ ಅನನ್ಯವಾದ ಕಾವ್ಯ ಸೌರಭ ಒದಗಿಸುವ ಹಿರಿಮೆ ತೋರಲು ವರ್ತಮಾನದ ಸಹಕಾರವಿತ್ತು.

ಇಂದು ಸಹಿಷ್ಣುತೆ ಇರದಿರಲು ಕಾರಣವಾದ, ನಕಲಿ ವಿಷ್ಣುಸ್ವರೂಪಿಗಳ ಅಟ್ಟಹಾಸದ, ದತ್ತಮಾಲೆ ಧರಿಸಿಕೊಂಡೇ ತಮ್ಮ ಧರ್ಮವನ್ನು ಪ್ರದರ್ಶನಗೊಳಿಸಬೇಕಾದ ಉದ್ರಿಕ್ತ ಸ್ಥಿತಿಯನ್ನು ತಂದವರು ಯಾರು ಎಂಬುದನ್ನು ವಿಶದವಾಗಿ ವಿವರಿಸಿ ಹೇಳಬೇಕಾಗಿಲ್ಲ. ಜಾತಿ ಹಾಗೂ ಧರ್ಮದ ಮೂಲಕ ಇಂದಿನ ಸಾಮಾಜಿಕ ನಿರ್ಣಯಗಳು ಅಂಗೀಕಾರಗೊಳ್ಳುತ್ತಿವೆ ರಾಜಕಾರಣಿಗಳಿಗಿಂತ, ರಾಜಕಾರಣಿಗಳನ್ನು ಓಲೈಸುವ ನಕಲಿ ಮಹಾವಿಷ್ಣು ಸ್ವರೂಪದ ಜನರಿಂದಾಗಿ ಭಾರತದ ಸಾಮಾಜಿಕ ವ್ಯವಸ್ಥೆ ಹದಗೆಟ್ಟಿದೆ. ವ್ಯವಸ್ಥೆ ಹದೆಗೆಟ್ಟಿರದ ಸಂದರ್ಭ ಇದ್ದುದರಿಂದ ತನ್ನ

ವರ್ತಮಾನದ ಸಂದರ್ಬದಲ್ಲಿ ಗೋವಿಂದ ಪೈಗಳಿಂದ ಗೊಲ್ಗೊಥಾದಂಥ ಅನನ್ಯ ಕಾವ್ಯಾಸಾರಗಳನ್ನು ಕಟ್ಟಿಕೊಡಲು ಸಾಧ್ಯವಾಯಿತೆಂದೇ ನನ್ನ ಅಭಿಪ್ರಾಯ.

# ಸಂದರ್ಭ ಸೂಚಿ

೧. ಗೋವಿಂದ ಸಂಸ್ಕೃತಿ ಲೋಕ: ಮಹಾಬಲ ಮೂರ್ತಿ ಕೊಡ್ಲೆಕೆರೆ ವಸಂತ ಪ್ರಕಾಶನ, ಜಯನಗರ ೩ನೇ ಬ್ಲಾಕ್, ಬೆಂಗಳೂರು ೫೬೦೦೧೧. ಪುಟ ೮೩

೨. ಎಸ್. ಶಿವಾಜಿ ಜೋಯಿಸ್: 'ಆಕಲನ', ಗೋವಿಂದ ಪೈ ಸಾಹಿತ್ಯ ಸಮೀಕ್ಷೆ , ಆರ್.ಎಸ್. ನಾಯ್ಡುನಗರ, ಮೈಸೂರು ೫೩೦೦೦೩. ಪುಟ ೨೩

೩. ಎಂ. ಗೋವಿಂದ ಪೈ: 'ಕನ್ನಡ ಸಾಹಿತ್ಯಜ್ಞರ ಆತ್ಮಕಥನ', ಮೈಸೂರು ವಿಶ್ವವಿದ್ಯಾಲಯ ಮೈಸೂರು. ಪುಟ ೨೬

೪. ಎಡ್ವರ್ಡ್ ನೊರೋನ್ಹ: 'ಗೊಲ್ಗೊಥಾ', ಮಿಂಚಿನ ಬಳ್ಳಿ, ಪ್ರಕಾಶನ ೧೯೫೩. ಪುಟ ೯

# ಉಪಸಂಹಾರ

ಗೋವಿಂದ ಪೈಯವರನ್ನು ಕಾವ್ಯ ರಚನೆಕಾರರಾಗಿ ಗ್ರಹಿಸಿಕೊಂಡು ಈವರೆಗೆ ನಡೆದ ಅಧ್ಯಯನಗಳಿಗಿಂತ ಭಿನ್ನವಾಗಿ ಗೋವಿಂದ ಪೈಯವರ ಸಂಶೋಧನಾತ್ಮಕ ಲೇಖನಗಳು, ದೀರ್ಘ ಲೇಖನಗಳು, ಕಾವ್ಯಗಳು, ಅವರ ಪ್ರಯೋಗಶೀಲತೆಯನ್ನು ಅದರ ಎಲ್ಲಾ ಸಾಧ್ಯತೆಗಳನ್ನು ಈ ಸಂಪ್ರಬಂಧ ತನ್ನ ಅಧ್ಯಯನ ವ್ಯಾಪ್ತಿಯ ಒಳಗೆ ಪರಿಶೀಲಿಸಿದೆ. ಗೋವಿಂದ ಪೈಯವರು ವಿದ್ವಾಂಸರಾಗಿ, ಇತಿಹಾಸ ಸಂಶೋಧಕರಾಗಿ, ಕವಿಕಾವ್ಯವಿಮರ್ಶಕರಾಗಿ, ಸ್ವಯಂ ಕವಿಯಾಗಿ ಬಹುಮುಖ ಪ್ರತಿಭಾ ಬಲದಿಂದ ಮಾಡಿದ ಪ್ರಯೋಗಗಳನ್ನು ಈ ಸಂಶೋಧನೆಯ ಸಂದರ್ಭದಲ್ಲಿ ಮುಖ್ಯ ಆಕರಗಳಾಗಿ ಬಳಸಿಕೊಳ್ಳಲಾಗಿದೆ.

ಗೋವಿಂದ ಪೈಯವರ ಬದುಕೇ ಒಂದು ಪ್ರಯೋಗಶಿಲತೆಯ ಸಾಕಾರ ರೂಪ. ಅವರು ಪ್ರಯೋಗ ಮಾಡಿದ್ದು ಕೇವಲ ಒಂದು–ಎರಡು ಕ್ಷೇತ್ರಗಳಲ್ಲಿ ಅಲ್ಲ ಸಾಹಿತ್ಯ ಕ್ಷೇತ್ರದಲ್ಲಿ ಕಾವ್ಯವಿಮರ್ಶೆಯಲ್ಲಿ, ಶಿಕ್ಷಣ ಪ್ರಕಾರಗಳಲ್ಲಿ ಹೊಸಹೊಸ ಶೋಧವನ್ನು ಮಾಡಿದರು. ಈ ಬಗೆಯ ಶೋಧದ ಮೂಲಕವೇ ಹೊಸತನವನ್ನು ಕಂಡುಕೊಂಡರು. ಇಂತಹ ಪ್ರಯೋಗಗಳನ್ನು ಕೈಗೊಂಡಾಗ ಸಾಮಾಜಿಕವಾಗಿ ಅನೇಕ ಅಡ್ಡಿ, ತಡೆಗಳನ್ನು ಎದುರಿಸಬೇಕಾಯಿತು. ಪ್ರತಿರೋಧವನ್ನು ಎದುರಿಸಬೇಕಾಯಿತು. ಆದರೆ ಗೋವಿಂದ ಪೈಯವರು ಇವೆಲ್ಲವನ್ನು ಮುಕ್ತವಾಗಿ ಸ್ವೀಕರಿಸಿದ್ದಾರೆ. ತನ್ನ ಪ್ರಯೋಗಗಳ ದೋಷಗಳನ್ನು ಒಪ್ಪಿಕೊಂಡೇ ಮತ್ತು ನಾವಿನ್ಯತೆಯ ಕಡೆ ಮುನ್ನುಗ್ಗಿದವರು.

ಗೋವಿಂದ ಪೈಯವರು ಸಂಶೋಧನೆ ಸಂಬಂಧಿತವಾಗಿ ಮಾಡಿದ ಚಿಂತನೆಯಲ್ಲಿ ಅನೇಕ ಸಂಗತಿಗಳು ಇಂದಿಗೂ ಕೂಡಾ ನಿಜವಾಗಿಯೇ ಇದೆ. ಈ ಸಂಪ್ರಬಂಧದಲ್ಲಿ ಆ ಬಗೆಯ ಚಿಂತನೆಯ ಸ್ವರೂಪವನ್ನು ವಿಶ್ಲೇಷಿಸುತ್ತಾ, ಅವುಗಳ ಮೌಲ್ಯವನ್ನು ಶೋಧಿಸಲಾಗಿದೆ. ವಾದಗ್ರಸ್ತನಾದ ಯಾವ ಅಂಶವೇ ಆಗಲಿ – ಅದರ ಮೂಲವನ್ನು ಕೆದಕಿ, ಪೂರ್ವೋತ್ತರ ಪಕ್ಷಗಳ ಮಂಡನ ಖಂಡನಗಳನ್ನು ತರ್ಕಶುದ್ಧವಾಗಿ ಮುಗಿಸಿ ತಮ್ಮದೆ ಆದ ಸ್ವತಂತ್ರ ಸಿದ್ಧಾಂತಕ್ಕೆ ಬರುವುದು ಅವರ ಪದ್ಧತಿ. ಸಾಮಾನ್ಯವಾಗಿ ಅವರ ಸಂಶೋಧನಾತ್ಮಕ ಲೇಖನಗಳು, ದೀರ್ಘ ಲೇಖನಗಳು ಅರವತ್ತು–ಎಪ್ಪತ್ತು ಪುಟಗಳವರೆಗೂ ಮುಂದುವರಿದ ಲೇಖನಗಳು. ಅವುಗಳಲ್ಲಿ ಆಧಾರರಹಿತವಾದ ಒಂದು ವಾಕ್ಯವೂ ಇರಲಾರದು. ಪ್ರತಿಯೊಂದು ಲೇಖನದ ಪ್ರತಿಯೊಂದು ಪುಟದಲ್ಲೂ ಕಾಲುಭಾಗಕ್ಕೂ ಹೆಚ್ಚಾಗಿ ಆಧಾರ ಗ್ರಂಥಲೇಖನಗಳ ಸೂಚನೆಗೆ ಮೀಸಲು.

ನಾನಾ ಪ್ರಮಾಣ ಗ್ರಂಥಗಳಿಂದ ಉದ್ಧರಿಸಿದ ಪೋಷಕಾಂಶಗಳೂ ಅಡಿ ಟಿಪ್ಪಣಿಗಳೂ ತುಂಬಿದ ಈ ಲೇಖನಗಳಿಂದ ಸ್ನಾತಕೋತ್ತರ ಜಿಜ್ಞಾಸುಗಳಿಗೂ ದಿಗ್ಭ್ರಮೆ ಹಿಡಿಯುವುದು ಇನ್ನು ಸೂಕ್ತ ಸಂಸ್ಕಾರವೂ ಪೂರ್ವಸಿದ್ಧತೆಯೂ ಇಲ್ಲದ ಪಂಡಿತಮನ್ಯರು ಕಕ್ಕಾಬಿಕ್ಕಿಯಾಗುವುದೇ ಸರಿ.

ಪೈಯವರ ವಿಷಯ ಮಂಡನ ಸಾಮರ್ಥ್ಯವನ್ನು, ವಾದವೈಖರಿಯನ್ನೂ, ಸ್ಪಷ್ಟ ನಿರ್ಭೀತ ಸಿದ್ಧಾಂತ ಕ್ರಮವನ್ನು ಕಂಡು ಬೆರಗಾಗದವರಿಲ್ಲ; ಅವರ ವಿದ್ವತ್ತೆಯ ಆಳವನ್ನೂ ಔನ್ನತ್ಯವನ್ನೂ, ವಿಸ್ತಾರವನ್ನೂ ಕಂಡು ಬೆರಗಾಗದವರಿಲ್ಲ, ಲೇಖನಗಳಲ್ಲಿ ಮಾತ್ರವಲ್ಲ, ಬಂಧು ಮಿತ್ರಗೋಷ್ಠಿಯಲ್ಲಿ ಅಷ್ಟೆ. ಚರ್ಚೆ ಪ್ರಾರಂಭಿಸಿ ಬಿಟ್ಟರೆಂದರೆ ತೀರಿತು. ಮತ್ತು ಅವರಿಗೆ ಬಾಹ್ಯ ಪ್ರಪಂಚದ ಜ್ಞಾನವಿರುತ್ತಿರಲಿಲ್ಲ. ಅವರು ಹೇಳಬೇಕು, ನಾವು ಕೇಳಬೇಕು– ಅಷ್ಟೆ. ಅವರ ಲೇಖನಗಳ ಶೈಲಿಯೂ ಗಡುಸಾದ ಶೈಲಿ. ಯಾವುದೇ ಗಹನ ವಿಚಾರ ದೋಹದದ ನಡುವೆ ಚಿರನೂತನ ಶಬ್ಧಗಳನ್ನು ಸೃಷ್ಟಿಸುತ್ತಾ ಹೋಗುತ್ತಿದ್ದರು. ಅವರ ಕನ್ನಡ ಶೈಲಿ ಎಷ್ಟು ಜಟಿಲವೋ ಎಷ್ಟು ದುರವಗಾಹ್ಯವೋ ಅವರ ಇಂಗ್ಲಿಷ್ ಭಾಷಾ ಶೈಲಿ ಅಷ್ಟೆ ಸರಳ ಶೈಲಿ, ಅಷ್ಟೆ ಮೋಹಕ ಶೈಲಿ. ಅವರು ಶಬ್ಧಗಳಿಂದಾಗಿ "ಕುರುಡು ಪರಡು"ವ ಹಾಗಿರಲಿಲ್ಲ; ಶಬ್ಧಗಳೇ ಅವರನ್ನು ಆರಿಸಿಕೊಂಡು ಬರುತ್ತಿದ್ದವು. ಸಂಸ್ಕೃತದ ಭವಭೂತಿಯಂತೆ ಅವರೂ 'ವಶ್ಯವಾಕ್'.

ಗೋವಿಂದ ಪೈಯವರು ತಾವು ಕಂಡುಕೊಂಡ ಸಾಹಿತ್ಯದ ಸೃಜನಶೀಲ ಶಕ್ತಿಯನ್ನು ತಮ್ಮ ಪ್ರಯೋಗದ ಮೂಲಕ ಅನಾವರಣಗೊಳಿಸಿದ ಬಗೆ ಹಾಗೂ ಸಮಕಾಲೀನ ಸಾಹಿತ್ಯದಲ್ಲಿ ಆ ಬಗೆಯ ಅವಕಾಶ ಇಲ್ಲದಿರುವ ಸಂಗತಿಯನ್ನು ಗುರುತಿಸಿವಾಗ ಒಟ್ಟು ಸಾಹಿತ್ಯದ ಮಿತಿಯನ್ನು ಶೋಧಿಸಲು ಸಾಧ್ಯವಾಗುತ್ತದೆ.

ಯಾವುದೇ ವಸ್ತುವಿನಲ್ಲೇ ಆಗಲಿ ತಾದಾತ್ಮ್ಯ ಹೊಂದಿ ಪಡೆಯುವ ಅನುಭವದಿಂದ ಬರೆಯುವುದು ಪೈಯವರ ಸಹಜ ಶಕ್ತಿಯೇ ಆದರೂ 'ಗೊಲ್ಗೊಥಾದಲ್ಲಿ ಒಂದು ಅಭೂತಪೂರ್ವ ಆತ್ಮೀಯತೆ, ಭಾವನಿರ್ಭರತೆ ಹರಿದಾಡಿದೆ. ಯಾಕೆ ಎಂದು ಶ್ರೀ ಗೌರೀಶ ಕಾಯ್ಕಿಣಿಯವರು "ಗೋವಿಂದನಾಮಸ್ಮರಣೆ" ಎಂಬ ಲೇಖನದಲ್ಲಿ ಯೋಚನೆ ಮಾಡಿದ್ದಾರೆ. "ಕ್ರಿಸ್ತ ಚರಿತದ ಕುರಿತು ಪೈಗಳಿಗೆ ವಿಶೇಷ ಆಸಕ್ತಿ ಇರಲು ಕಾರಣವೇನೋ. ಹಿಂದೆ ದಿ. ಪಾಂಡೇಶ್ವರ ಗಣಪತಿಯವರು ಕ್ರಿಸ್ತಜನ್ಮದ ಕುರಿತು ಬರೆದ ಕವನಗಳನ್ನು ಪೈಗಳು ಬಹಳ ಮೆಚ್ಚಿಕೊಂಡಿದ್ದರಂತೆ. ಆದುದರಿಂದಲೇ ಕ್ರಿಸ್ತನ ದೇಹಾವಸಾನದ ಈ ಖಂಡಕಾವ್ಯಕ್ಕೆ ಅವರಿಗೆ ಪ್ರೇರಣೆ ದೊರೆಯಿಂದು ದಿ.

ಪಾಂಡೇಶ್ವರರು ಅನ್ನುತ್ತಿದ್ದರು. ಕ್ರಿಸ್ತಚರಿತೆ, ಕ್ರೈಸ್ತಮತಗಳ ಬಗೆಗೆ ಅಂತರಂಗದಲ್ಲಿ ಹಚ್ಚದಾಗಿ ಇದ್ದ ಒಂದು ಕೋಮಲ ಭಾವನೆಯೇ ಮೂಲದ ಪ್ರೇರಣೆ ಆಗಿರಬಹುದು.

ಯೇಸುವಿನ ಕೊನೆಯ ದಿನದ ಚಿತ್ರಣದಲ್ಲಿ ಈ ನಾಲ್ಕು ಸುವಾರ್ತೆಗಳು ಓಘದಲ್ಲಿ ಏಕಮುಖತೆ ಇರುವಂಥವಾದರೂ ವಿವರದಲ್ಲಿ ಎಲ್ಲವೂ ಏಕಪ್ರಕಾರ ವಚನಗಳಿಂದ ಕೂಡಿದುವಲ್ಲ. ನಾಲ್ಕರ ಒಟ್ಟು ಗ್ರಹಿಕೆಯಲ್ಲಿ ಸಿಗುವ ಚಿತ್ರವಂತೂ ಸಮಗ್ರವಾದುದು.

ಪೈಯವರು ಪ್ರತಿಯೊಬ್ಬ ಸುವಾರ್ತೆಗಾರನ ಕೃತಿಯನ್ನು ಅವನ ವಿಶಿಷ್ಟ ಉದ್ದೇಶದ ಹಿನ್ನೆಲೆಯಲ್ಲಿ ನೋಡುವ ವಿಶ್ಲೇಷಿಸುವ ಆಧುನಿಕ ಕ್ರಮವನ್ನು ಗೌರವಿಸಬಹುದಾದರೂ ಕ್ರಿಸ್ತನ ಬದುಕು ಸಾವಿಗೆ ಸಂಬಂಧಿಸಿದ ಚಿತ್ರಣಕ್ಕೆ ನಾಲ್ಕು ಸುವಾರ್ತೆಗಳನ್ನೂ ಒಟ್ಟಿಗೆ ತರಬೇಕಾದುದು ಉಚಿತವೂ ಅನಿವಾರ್ಯವೂ ಆಗುತ್ತದೆ. ಪೈಯವರು ತನ್ನ ಕಾವ್ಯದಲ್ಲಿ ಸಮರ್ಪಕವಾಗಿ ಮತ್ತು ಸಮರ್ಥವಾಗಿ ನಿರ್ವಹಿಸಿದ್ದು ಈ ಕ್ರೋಢೀಕರಣವನ್ನು ಆದ್ದರಿಂದಲೇ ಗೊಲ್ಗೋಥಾದ ಸಾಲು, ವಿವರಗಳಿಗೆ ಆಧಾರಗೊಳ್ಳುವಾಗ ಸುವಾರ್ತೆಗಳಲ್ಲಿನ ಆಯಾಯ ರಚಕರ ಆಯಾ ಸಂದರ್ಭದ ಎಲ್ಲ ವಚನಗಳೂ ಬರುವುದಿಲ್ಲ. ಯೇಸುವಿನ ಕಡೆಯ ದಿನವನ್ನು ಕುರಿತಿರುವ ಮತ್ತಾಯನ ೪೬ ವಚನಗಳಲ್ಲಿ ೨೯ ವಚನಗಳೂ ಯೋಹಾನನ ೫೦ ರಲ್ಲಿ ೨೬ ವಚನಗಳೂ ಕೇವಲ ನೇರ ಅನುವಾದವಾಗಿ ಕೆಲವು ವಿವರಕ್ಕೆ ಆಧಾರವಾಗಿ ಮಾತ್ರ ಬಂದಿವೆ. ಕಾವ್ಯದಲ್ಲಿ ಈ ವಚನಗಳು ಬಳಕೆಯಾಗಿರುವ ಕ್ರಮವೂ ಸುವಾರ್ತೆಯಲ್ಲಿನಂತೆ ತೀರ ಕ್ರಮಾಗತವಲ್ಲ ಹಿಂದು ಮುಂದಾಗುತ್ತವೆ.

'ಅದೇ ಪದ ಸಮೂಹ, ಅದೇ ಅರ್ಥ ಸಂಪತ್ತು; ಆದರೂ ಕಟ್ಟುವ ಕೌಶಲದಿಂದ ಕಾವ್ಯ ಹೊಸದಾಗುತ್ತದೆ. ಕಾವ್ಯ ಮೀಮಾಂಸೆಯಲ್ಲಿ ಈ ಉಕ್ತಿಗೆ ಎಷ್ಟು ಬೆಲೆಯೋ ಆದರೆ ಗೋವಿಂದ ಪೈಯವರ ಗೊಲ್ಗೊಥಾದ ರಚನೆಯ ಹಿನ್ನಲೆಯಲ್ಲಿ ಈ ವಿವರಣೆ ಬಹಳ ಸಂಗತವಾಗಿ ಕಾಣುತ್ತದೆ. ಗ್ರಥನ ಕೌಶಲದ ಅತಿಶಯತೆಯನ್ನು ಪೈಯವರು ಸುವಾರ್ತೆಗಳ ವಚನಗಳನ್ನು ಸಮೂಹಿತಗೊಳಿಸಿದ ನೈಪುಣ್ಯದಲ್ಲಿ ಕಾಣಬಹುದು.

ಗೊಲ್ಗೊಥಾ ಇದು ೩೭೭ ಸಾಲುಗಳುಳ್ಳ ಖಂಡಕಾವ್ಯ ಗಾತ್ರದಲ್ಲಿ ಅಷ್ಟೇನು ದೊಡ್ಡದಲ್ಲ. ಆದರೆ ಕಾವ್ಯಗುಣದಲ್ಲಿ ಮಾತ್ರ ನಿಜವಾಗಿಯೂ ದೊಡ್ಡದು. ಪ್ರಾರಂಭದಿಂದ ಅಂತ್ಯದವರೆಗೆ ವಿಸ್ತರಿಸಿರುವ ಕವಿಯ ಚಿತ್ರಕಶಕ್ತಿ ಹಾಗೂ ಉಪಮೆಗಳು ಕಾವ್ಯದ ಮೌಲಿಕತೆಯನ್ನು ಹೆಚ್ಚಿಸಿದೆ.

ಯೇಸುವಿನ ಕೊನೆಯ ದಿನದ ನಸುಕಿನಲ್ಲಿ ಕೋಳಿ ಮೂರನೆಯ ಬಾರಿ ಕೂಗಿ ಅವನನ್ನು ಕೊಲ್ಲಬೇಕೆಂದು ಬಯಸಿದ ಯೆಹೂದ್ಯರ ಮನಸ್ಸಾಕ್ಷಿಯ ಹಾಗೆ ಸುಮ್ಮನಾಯಿತು. ಯೇಸುವನ್ನು

ಕೊಲ್ಲುವ ದಿನ ಇಂದು ಉದಯವಾಯಿತು ಎಂದು ಕವಿ ಚಮತ್ಕಾರದಿಂದ ಸೂಚಿಸಿದ್ದಾನೆ. ಯೆಹೂದ್ಯರು ಯೇಸುವನ್ನು ಕೊಲ್ಲಬೇಕೆಂದು ಬಯಸಿದರು. ಅದರಿಂದ ಅವರ ಮನಸ್ಸಾಕ್ಷಿ ಅಂದರೆ ಸಹಸದ್ವಿವೇಕಬುದ್ಧಿ ಸುಮ್ಮನಾಯಿತು. ಆದರೆ ಅದರ ಪ್ರಭಾವವು ಅವರ ಹಿಂಸಾಪ್ರವೃತ್ತಿಯ ಮೇಲೆ ಬೀಳಲಿಲ್ಲ. ಅನ್ಯಾಯದ ವಿಚಾರಣೆಗೆ ಹೇಸಿ ಚಂದ್ರನು ಅಸ್ತನಾದನು. ಜಗತ್ತಿನ ಪಾಪದ ಸಾಲವಿಂದು ತೊಳೆದುಹೋಗುವುದೆಂದು ಸಾರುವಂತೆ ತಂಗಾಳಿ ಸುತ್ತೆಲ್ಲ ಬೀಸಿತು. ಸ್ವರ್ಗಕ್ಕೆ ದೇವಕುಮಾರು ತಿರುಗಿಬರುವನೆಂಬ ಸಂತೋಷದಿಂದ ದೇವದೂತರು ಮಂಗಲವಾದ್ಯಗಳನ್ನು ಬಾರಿಸುತ್ತಿರುವರೋ ಎಂಬಂತೆ ಬೆಳಗಿನ ಹಕ್ಕಿಗಳು ಚಿಲಿಪಿಲಿಗಟ್ಟಿದವು.

ಹೀಗೆ ಚಿತ್ರದ ಮೇಲೆ ಚಿತ್ರವು ಹೆಣೆದುಕೊಂಡು 'ಗೊಲ್ಗೊಥಾ ಕೃತಿ ಮೊದಲಾಗುತ್ತದೆ. ಮುಂದೆ ಸಾಗುತ್ತದೆ ಅವು ಬರೀ ಚಿತ್ರಗಳಾಗುವುದಿಲ್ಲ. ಕವಿಕಲ್ಪನೆಗಳಾಗುವುದಿಲ್ಲ. ಯೇಸುವಿನ ಬಗ್ಗೆ ನಮ್ಮ ಆದರವನ್ನು ಹೆಚ್ಚಿಸುವ ಹಾಗೂ ಅವನ ಹಿಂಸಕರ ಬಗ್ಗೆ ನಮ್ಮ ಕನಿಕರ ಕೆರಳಿಸುವ ಪ್ರತಿಮೆಗಳಾಗುತ್ತವೆ. ಇಲ್ಲಿಯೇ ಈ ನಿರ್ಮಿತಿಯ ಹಿರಿಮೆಯಿದೆ.

ಕೊನೆಯ ದಿನದ ಈ ಕಥನದಲ್ಲಿಯೂ ಯೇಸುವಿನ ಮಹಾವ್ಯಕ್ತಿತ್ವದ ಸಮಗ್ರಚಿತ್ರವನ್ನು ಕವಿ ಕಣ್ಣ ಮುಂದೆ ನಿಲ್ಲಿಸಿರುತ್ತಾನೆ. ಕೃತಿಯ ಬಹುಭಾಗವು ಇದಕ್ಕೆ ಮೀಸಲಾಗಿದೆ.

ಮುಂದೆ ಪಿಲಾತನೆಂಬ ನ್ಯಾಯಾಧಿಶನ ಮುಂದೆ ಯೇಸುವಿನ ವಿಚಾರಣೆ ನಡೆಯುತ್ತದೆ. ಯೆಹೂದ್ಯರಲ್ಲಿ "ಅವನನ್ನು ಗಲ್ಲಿಗೇರಿಸು ಸಿಲುಬೆಗೆ ಹಾಕು' ಎಂದು ಕೂಗುತ್ತಾರೆ. ಪಿಲಾತನ ಮನಸ್ಸು ಮಾತ್ರ ಈ ಶಿಕ್ಷೆಯನ್ನು ವಿಧಿಸಲು ಸಿದ್ಧವಿರಲಿಲ್ಲ. ಆದರೆ ಜನಜಂಗುಳಿಯಿಂದ ತನಗೆ ತೊಂದರೆ ಬೇಡವೆಂದು ಯೋಚಿಸಿ 'ಇವರ ನೆತ್ತರ ತೃಷೆಗೆ ನಿರ್ದೋಷಿ ಈತನನ್ನೀಯುವುದೇ ನಿಶ್ಚಯಂ' ಎಂದು ಅವನು ಬಗೆಯುತ್ತಾನೆ. ಯೇಸುವಿಗೆ ಮರಣಾಜ್ಞೆಯನ್ನು ವಿಧಿಸುತ್ತಾನೆ. ಇಂದು ಮುಂದಿನ ವರ್ಣನೆಗಳಲ್ಲಿ ಕವಿಯ ಕಲ್ಪನಾ ಶಕ್ತಿ ಮತ್ತು ಪಾಪಪ್ರಜ್ಞೆ ಇನ್ನೂ ಮಿಗಿಲಾದ ಎತ್ತರವನ್ನು ಮುಟ್ಟಿರುತ್ತದೆ. ಅವನನ್ನು ಗಲ್ಲಿಗೇರಿಸಲು ನಿಯುಕ್ತರಾದ ರಾಣುವೆಯರು ಅವನಿಗೆ ಕೆಂಪು ಬಟ್ಟೆಯನ್ನು ಹೊದಿಸಿ ಮುಳ್ಳಿನ ಮುಕುಟವನ್ನು ತೊಡಿಸಿ ಮೂದಲಿಕೆಯ ಮಾತುಗಳೊಡನೆ ಬೆತ್ತದಿಂದ ಬಡಿಯಲು ಮೈಯೆಲ್ಲ ಬಾಸುಳೆಗಳೆದ್ದವು. ರಕ್ತ ಸುರಿಯಿತು. ಅದನ್ನು ನೋಡಿದರೆ 'ಪ್ರೇಮದ ಅರುಣೋದಯವೋ ನಿರ್ದೋಷನಿವನೆಂಬ ಮೂಕ ಸಾಕ್ಷಿಯೋ ಎನಲು ನೆತ್ತರೊಡಮೂಡಿ ದೊಡಮವನೊಂದು ಮಾತನೆತ್ತಿಲ್ಲ, ಮಾ ಎಂದಿಲ್ಲ!" ಯೇಸುವಿನ ಸಹನಗುಣದ ಪರಮ ಸಾತ್ವಿಕತೆಯ ಸಾರವನ್ನು ಇಲ್ಲಿ ಕವಿ ವರ್ಣಿಸಿದ್ದಾರೆ.

ಮುಂದೆ ಯೇಸುವನ್ನು ಗೊಲ್ಗೊಥಾಗಿರಿಯ ಶಿಖರಕ್ಕೆ ಕರೆಯೊಯ್ದು ಶಿಲುಬೆಗೇರಿಸಿದರು. ಕೈಕಾಲುಗಳಿಗೆ ಮೊಳೆ ಜಡಿದರು ಅವೆಲ್ಲವನ್ನೂ ಅವನು ಶಾಂತನಾಗಿ ಸಹಿಸಿಕೊಂಡನು. ಹದ್ದು ಬಿಗಿಯಾಗಿ ಹಿಡಿದ ಲಾವಕ ಹಕ್ಕಿ ಸೌಮ್ಯವಾಗಿ ಮರಣಕ್ಕೆ ಸಿದ್ಧವಾಗುತ್ತದೆ. ಪಶ್ಚಿಮದ ಆಕಾಶದಲ್ಲಿ ಬಿದಿಗೆಯ ಚಂದ್ರನು ಮೂಡಿ ತಂಪು ಬೆಳಕನ್ನು ಬೀರುತ್ತಾನೆ. ಬಿಲ್ಲಿಗೆ ಹೂಡಿದ ಬಾಣವು ಸರಳವಾಗಿ ನಿಂತಿರುತ್ತದೆ. ಇವೆಲ್ಲದರ ಗುಣವನ್ನು ಯೇಸು ಹೊಂದಿರುತ್ತಾನೆ. ಎಲ್ಲಕ್ಕಿಂತ ಹೆಚ್ಚಾಗಿ ಮರಣವೆಂಬ ಮರದಲ್ಲಿ ಬಿಟ್ಟಿರುವ ಅಮೃತದ ಹಣ್ಣಿನಂತೆ ಸಿಲುಬೆಯ ಮೇಲೆ ಯೇಸು ತೂಗುತ್ತಿದ್ದನು. ಯಾಕೆಂದರೆ ಅವನು ಅಮೃತಪುತ್ರ, ದೇವಸುತ, ಮರಣಾತೀತ.

ಮರಣದ ಭಿತಿ ನಷ್ಟವಾಗಿ ಹೋಗಿರುವ ಆ ಮಹಾಪುರುಷನ ಮರಣ ಸಮಯದ ಮನೋಭಾವವನ್ನು ಕವಿ ಹೀಗೆ ಕಡಿಯುವವರಿಗೆ ತಣ್ಣೆಳನ್ನೂ ಈಯುವ ಮರದಂತೆ, ತನ್ನ ಅಳಲನ್ನು ಅವರ ಹಂಬಲದಿ ಮರೆತು ಉಸುರಿದನು. "ಕ್ಷಮಿಸು ಇವರನೆಲೆ ತಂದೆ! ತಾವೇನನ್ನು ಎಸಗಿದಪೆವೆಂದು ಅರಿಯರು ಇವರು. ಯೇಸುವಿನ ಈ ಚಿರಪರಿಚಿತವಾದ ವಾಕ್ಯಗಳನ್ನೇ ಕವಿ ತನ್ನ ಮಾತಿನಲ್ಲಿ ಹೇಳಿದ್ದಾನೆ. ಅವರ ಮಾತನ್ನು ಕೇಳಿ ನೆರೆದವರು "ನಮಗಾಗಿ ಕ್ಷಮೆಯನ್ನು ಕೇಳುವುದಿರಲಿ, ನೀ ದೇವಸುತನಾಗಿದ್ದರೆ ಸಿಲುಬೆಯಿಂದ ಇಳಿದು ಬಾ ನೋಡೋಣ. ಅನ್ಯರನ್ನು ರಕ್ಷಿಸಿದ ಇವನು ತನ್ನ ತಾನೆ ರಕ್ಷಿಸಲಾರನಾದನೆ?" ಎಂದು ಮುಂತಾಗಿ ಅಣಕಿದರು. ಈ ಸಂದರ್ಭದಲ್ಲಿ ಮಹಾ ಮಾನವನ ವಿಷಯವಾಗಿ ಗೌರವವು ಹೆಚ್ಚುವಂತೆ ಕಾಲಕಾಲಕ್ಕೆ ಬರುವ ಮಹಾಮಾನವರನ್ನು ಮಾನವತೆ ಕಡಿಸಿಕೊಳ್ಳುವ ರೀತಿಯಿಂದ ವೇದನೆಯುಂಟಾಗುತ್ತದೆ. ಈ ದೃಷ್ಟಿಯಿಂದ 'ಗೋಲ್ಗೊಥಾ' ಇಂದು ವಿಶಿಷ್ಟ ಬಗೆಯ ದುರಂತ ಕಾವ್ಯವಾಗಿ ಪರಿಣಮಿಸಿದೆ. ಇದರಲ್ಲಿ ಯೇಸುವನ್ನು ನೋಡಿದಾಗ ಶಾಂತಿ ಸಮಧಾನಗಳು ಉಕ್ಕಿ ಬರುತ್ತವೆ.

ತರುವಾಯ ಕತ್ತಲೆ ಮುಸುಕಿತು "ದೇವಸುತನ ಮೃತನೀ ಮೃತಿನಾಟಕದ ಕಡೆಯ ತೆರೆಯಂತೆ ಭೂವ್ಯೋಮಗಳ ನಡುವೆ ಮುಸುಕಿದುದು" "ತಂದೆಯೆ! ನನ್ನ ಆತ್ಮವನ್ನು ನಿನ್ನ ಕೈಯ್ಯೊಪ್ಪಿಸುವೆ!" ಎಂದು ಗಗನದಲ್ಲಿ ಯೇಸು ಕಣ್ಣೂರಿ ತುದಿ ಬೆಟ್ಟದಿಂದ ಕರೆಯುವ ತಾಯೆಡೆಗೆ ಮರಿಜಿಂಕೆ ಜಿಗಿಯುವಂತೆ ಸುಗ್ಗಿಯೆಡೆಗೆ ಆಯ್ದುವ ಬಾನಕ್ಕಿಯಂತೆ ದಿನಮುಖದೊಳು ಇರುಳಿನ ಸೊಡರು ನೇಸರವನ್ನೂ ಸೇರುವಂತೆ ಕ್ಷಿತಿಜದಿಂದ ಸಿಡಿದು ಮೇಲೆ ನೆಗೆಯುವ ಮಿಂಚಿನಂತೆ ಯೇಸುವಿನ ಆತ್ಮವು ಬೆಳಕಿನ ಬೀಡಿಗೆ ಹೋಯಿತು.

ಗೊಲ್ಗೊಥಾ ಕೃತಿ ಚಿಕ್ಕದಾದರೂ ಕನ್ನಡ ಕಾವ್ಯಕ್ಕೆ ಹಿರಿಯ ಕಾಣಿಕೆ. ಅಪರೂಪದ ಕಾಣಿಕೆ. ಇದರ ವಿಷಯವು ಕಾಲದೇಶಾತೀತ, ಅದರ ನಿರೂಪಣೆಯೂ ಸಾರ್ವಕಾಲಿಕ. ಅಂತೇ ಕನ್ನಡಿಗರು ಮಾತ್ರವಲ್ಲ ಕಾವ್ಯರಸಿಕರು ಯಾವ ಕಾಲದಲ್ಲಿಯೂ ಓದಿ ಮೆಚ್ಚಬೇಕಾದ ಕಾವ್ಯವಿದು. ಇಲ್ಲಿನ ನಿರೂಪಣೆಯಲ್ಲಿ ಕೊಂಚ ಕ್ಲಿಷ್ಟತೆ ತಲೆದೋರಿದೆ. ಅದರೆ ಗೋವಿಂದ ಪೈಗಳ ಪರಿಣತ ಪ್ರಜ್ಞೆಯಿಂದ ಕೂಡಿದ ಪರಿಪಕ್ವತೆ ಅದನ್ನು ಅಲ್ಲಗೆಳೆಯುವಂತೆ ಮಾಡಿದೆ. ವಿಶ್ವವಿಶಾಲತೆ, ಇತಿಹಾಸ ಜ್ಞಾನ ಮತ್ತು ಪ್ರತಿಭೆ, ಇವುಗಳ ಸಂಗಮದಿಂದ ಸಾಹಿತ್ಯ ಕ್ಷೇತ್ರದಲ್ಲಿ ಎಂತ, ಚಮತ್ಕಾರ ನಿರ್ಮಿತಿಯಾಗಬಹುದೆಂಬುದಕ್ಕೆ 'ಗೊಲ್ಗೊಥಾ'' ಕೊನೆಯವರೆಗೂ ನಿದರ್ಶನವಾಗಿ ನಿಲ್ಲತಕ್ಕ ಕೃತಿಯೆಂದು ಹೆಮ್ಮೆಯಿಂದ ಹೇಳಬಹುದು. 'ಗೊಲ್ಗೊಥಾ' ಬೈಬಲ್‌ನ ಅಗಾಧ ಪ್ರಮಾಣದ ಅದುರನ್ನು ಸಂಸ್ಕರಿಸಿ ತೆಗೆದ ಬಂಗಾರದಿಂದ ಮಾಡಿದ ಸುಂದರ ಮೂರ್ತಿ.

# ಪರಾಮರ್ಶನ ಗ್ರಂಥಗಳು


೧. ಶ್ರೀ. ರಂ. ಶ್ರೀ. ಮುಗಳಿ : ಕನ್ನಡ ಸಾಹಿತ್ಯ ಚರಿತ್ರೆ, ಸಮಾಜ ಪುಸ್ತಕಾಲಯ, ಧಾರವಾಡ, ೨ನೇ ಆವೃತ್ತಿ ೧೯೯೬

೨. ಶ್ರೀನಿವಾಸ ಹಾವನೂರು : ಹೊಸಗನ್ನಡದ ಅರುಣೋದಯ ಕರ್ನಾಟಕ ಸರ್ಕಾರ ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು ೨೦೦೦

೩. ಜೆ.ಪಿ. ರಾಜರತ್ನಂ : 'ಯೇಸುಕ್ರಿಸ್ತ' ವಿದೇಹ ೧೪, ೧೭ನೇ ಕ್ರಾಸ್ ರೋಡ್ ಮಲ್ಲೇಶ್ವರಂ, ಬೆಂಗಳೂರು-೩ ೧೯೫೧

೪. ಆರ್. ರಾಮದೇವ ಶೆಣೈ (ಸಂ) : 'ದೀವಿಗೆ' (ರಾಷ್ಟ್ರ ಕವಿ ಮಂಜೇಶ್ವರ ಗೋವಿಂದ ಪೈ ಸ್ಮಾರಕ ಗ್ರಂಥ), ಪ್ರಕಾಶಕರು, ಗೋವಿಂದ ಪೈ ಸ್ಮಾರಕ ಸಮಿತಿ, ಪ್ಲಾಟ್ ನಂ. ೨, ಸ್ಯಾಂಕಿ ಅಪಾರ್ಟ್‌ಮೆಂಟ್, ಸದಾಶಿವನಗರ, ಬೆಂಗಳೂರು. ೧೯೯

೫. ಜಿ.ಎಸ್. ಸಿದ್ದಲಿಂಗಯ್ಯ ಮತ್ತು ಎಂ.ಎಚ್. ಕೃಷ್ಣಯ್ಯ (ಸಂ) : "ಸಾಲುದೀಪಗಳು" ಕರ್ನಾಟಕ ಸಾಹಿತ್ಯ ಅಕಾಡೆಮಿ, ಜೆ.ಪಿ. ರಸ್ತೆ ಬೆಂಗಳೂರು, ೨೦೦೧

೬. ಉ.ಕಾ. ಸುಬ್ಬರಾಯಾಚಾರ್ : ಯೇಸುಕ್ರಿಸ್ತ, ಸರುಚಿ ಪ್ರಕಾಶನ ಸರಸ್ವತೀಪುರಂ, ಮೈಸೂರು-೧೯೬೧

೭. ಎಡ್ವರ್ಡ್ ನೊರೋನ್ಹ : 'ಗೋವಿಂದ ಪೈ', ಪುಸ್ತಕದಲ್ಲಿ ಪಕಟಿತ ಲೇಖನ: 'ಗೊಲ್ಗೊಥಾ' ಪ್ರ. ಪ್ರಸಾರಾಂಗ ಮೈಸೂರು ವಿಶ್ವವಿದ್ಯಾಲಯ, ಮೈಸೂರು

೮. ಎಸ್. ಶಿವಾಜಿ ಜೋಯಿಸ್ : "ಆಕಲನ" ಸಮರಸ ಪ್ರಕಾಶನ, ಆರ್. ಎಸ್. ನಾಯ್ಡು ನಗರ, ಮೈಸೂರು–೨೦೦೫

೯. ವೈ.ಎನ್. ಲೂಯಿಸ್ : ಗೆತ್ಸೇಮನೆಯ ತೋಟದಲ್ಲಿ 'ಗಾನಲಹರಿ' ವಿಚಾರ ಸಾಹಿತ್ಯ ಲಿಮಿಟೆಡ್ ಬೆಂಗಳೂರು – ೧೯೫೮

೧೦. ವಿಲಿಯಂ : "ಬೈಬಲ್ ಭಾಷಾಂತರ ರೂಪಾಂತರ" ಬೈಬಲ್ ಸೊಸೈಟಿ ಆಫ್ ಇಂಡಿಯಾ ಕರ್ನಾಟಕ ಶಾಖೆ, ಬೆಂಗಳೂರು–೨೦೦೪.

೧೧. ವಿಲಿಯಂ : ಬೈಬಲ್ ಭಾಷಾಂತರ ರೂಪಾಂತ ಬೈಬಲ್ ಸೊಸೈಟಿ ಆಫ್ ಇಂಡಿಯಾ ಕರ್ನಾಟಕ ಶಾಖೆ, ಬೆಂಗಳೂರು–೨೦೦೪

೧೨. ಡಾ. ಲಕ್ಷ್ಮೀನಾರಾಯಣ ಭಟ್ಟ ಎಸ್.ಎಸ್. (ಸಂ) : ಗೋವಿಂದ ಪೈ ಶತಮಾನ ಸ್ಮರಣೆ ಕರ್ನಾಟಕ ಸಾಹಿತ್ಯ ಅಕಾಡೆಮಿ ಬೆಂಗಳೂರು ೧೯೮೪

೧೩. ಡಾ.ಹಾ.ಮಾ. ನಾಯಕ (ಸಂ) : ಜೀವನ ಕಾರ್ಯಾಲಯ ಬೆಂಗಳೂರು ೧೯೮೩

೧೪. ಡಾ। ಶ್ರೀನಿವಾಸ ಹಾವನೂರ : ಕನ್ನಡದಲ್ಲಿ ಕ್ರೈಸ್ತ ಸಾಹಿತ್ಯ ಹನಿಗತೆ, ಕಂಪ್ಯೂಟರ್ ಇತ್ಯಾದಿ, ಅನನ್ಯ ಪ್ರಕಾಶನ, ಧಿಯೋಬಾಲ್ಡ್ ರಸ್ತೆ, ನಜರಾಬಾದ್, ಮೈಸೂರು–೧೯೮೨

೧೫. ಹೆರಂಜೆ ಕೃಷ್ಣಭಟ್ಟ ಮತ್ತು ಮುರಳೀಧರ ಉಪಾಧ್ಯ ಹಿರಿಯಡಕ (ಸಂ) : 'ಗೋವಿಂದ ಪೈ ಸಂಶೋಧನ ಸಂಪುಟ' ರಾಷ್ಟ್ರಕವಿ ಗೋವಿಂದ ಪೈ ಸಂಶೋಧನ ಕೇಂದ್ರ, ಉಡುಪಿ ೧೯೯೫

೧೬. ರಾಜರತ್ನಂ ಜಿ.ಪಿ : "ಕವಿ ಗೋವಿಂದ ಪೈ" ಜೀವನ ಕಾರ್ಯಾಲಯ, ಬೆಂಗಳೂರು ೧೯೪೯

೧೭. ಗೋವಿಂದ ಪೈ : "ಗೊಲ್ಗೊಥಾ ಅಥವಾ ಯೇಸುವಿನ ಕಡೆಯ ದಿನ" ೨ನೆಯ ಮುದ್ರಣ ಪ್ರಕಾಶಕರು: ಬಾಳಿಗಾ ಎಂಡ್ ಸನ್ಸ್ ಮಂಗಳೂರು-೧ ೧೯೫೬

೧೮. ಗೋವಿಂದ ಪೈ : "ಗೊಲ್ಗೊಥಾ ಮತ್ತು ವೈಶಾಖಿ" ಮೈಸೂರು, ಕಾವ್ಯಾಲಯ ಪ್ರಕಾಶಕರು ಮೈಸೂರು - ೧೯೫೮

೧೯. ಗೋವಿಂದ ಪೈ : "ಗಿಳಿವಿಂಡು" ಕರ್ನಾಟಕ ಸಂಘ ಸೆಂಟ್ರಲ್ ಕಾಲೇಜು, ಬೆಂಗಳೂರು, ೧೯೬೨

೨೦. ದೇ. ಜವರೇಗೌಡ : ಗದ್ಯಶೈಲಿ, ಪ್ರಕಾಶಕರು, ಡಿ.ವಿ.ಕೆ. ಮೂರ್ತಿ ಕೃಷ್ಣಮುರ್ತಿಪುರಂ: ಮೈಸುರು-೪, ೧೯೭೮

೨೧. ಚ. ಸುಂದರೇಶನ್ : "ಗೊಲ್ಗೊಥಾ - ವೈಶಾಖಿ" ವಿಮರ್ಶೆ ಭವತಾರಿಣಿ, ೫೨, ಚೇಳುಬೀದಿ ಬೆಂಗಳೂರು-೩, ೧೯೬೬

೨೨. ಪ್ರೊ.ಎಸ್. ಅನಂತನಾರಾಯಣ : ಕಾವ್ಯಾಂತರಂಗ, ಸರಸ್ವತೀಪುರಂ, ಮೈಸೂರು-೧೯೮೨

೨೩. ಪಿ. ಗುರುಶಾಂತಪ್ಪ : ಕ್ರಿಸ್ತನ ಶ್ರಮ ಮರಣಗಳ ಚರಿತ್ರೆ ಭಾಷಾಂತರ-೧೯೪೯

